# ಗಾಂಧೀ ಚರಿತ್ರೆ



ಶಾಂತಂ ವೀರಾಸನಸ್ಥಂ ವಿಕಸಿತವದನಂ ಸತ್ಯದೀಕ್ಷಾನುಬದ್ಧಂ ।
ಹಸ್ತೇನೈಕೇನ ತನ್ವಂತಮವಿರತಗತಿಂ ಸೂತ್ರ ಯಂತ್ರಸ್ಯ ಚಕ್ರೇ ।
ತೂಲಂಚಾನ್ಯೇನ ಧೃತ್ವಾಽ ವಿಷಮಮನಘಮಾಕರ್ಷಯಂತಂ ಸಸೂತ್ರಂ ।
ಗಾಂಧಿಂ ದಾಸತ್ವಬಂಧಚ್ಛಿದಮಮರಪದಂ ಪ್ರಾಪ್ರಮಾರಾಧಯಾಮಿ ।

॥ ವಂದೇ ಮಾತರಂ ॥

# ಮಹಾತ್ಮಾ

# "ಗಾಂಧೀ ಚರಿತ್ರೆ"

ಮಾನ್ಯ ಮಂತ್ರಿ ಶ್ರೀ. ರಂಗನಾಥ ದಿವಾಕರರವರ ಮುನ್ನುಡಿಯೊಡನೆ

ಮತ್ತು

# ಮಹಾತ್ಮಾ

# "ಶ್ರದ್ಧಾಂಜಲಿ"

ಬರೆದವರು :

ವೇ। ರಾಮಭಟ್ಟ ವಿಠ್ಠಲ ಅರ್ಚಕ

ಸಿದ್ದಾಪುರ

೧೯೪೯

( ಜಯಹಿಂದ್ )

[ ಬೆಲೆ ೮ ಆಣೆ

# ಮುನ್ನುಡಿ

ನಾನು ಹೋದ ಮೇ ತಿಂಗಳಲ್ಲಿ ಜೋಗಿಗೆ ಹೋದಾಗ ಅಕಸ್ಮಾತ್ತಾಗಿ ಶ್ರೀ. ರಾಮಭಟ್ಟರು ನನಗೆ ತಾವು ಬರೆದ "ಗಾಂಧೀ ಚರಿತ್ರೆಯ ಹಲವು ಷಟ್ಪದಿಗಳನ್ನು ಓದಿತೋರಿದರು. ಅವು ಬಹಳ ಲಲಿತ ವಾದವುಗಳೂ ಸುಲಭವೂ ಸ್ವಾರಸ್ಯವುಳ್ಳವೂ ಕಂಡವು. ಈಗ ಅವುಗಳನ್ನು ಅವರು ಅಚ್ಚು ಹಾಕಿಸುತಿರುವ ಸಂಗತಿ ಬಹಳ ಸಂತೋಷಕಾರಕವು.

ಗಾಂಧೀಜಿಯವರ ಚರಿತ್ರೆ ಒಂದು ದೊಡ್ಡ ಮಹಾಭಾರತದಂತೆ ಇದೆ. ಅದನ್ನು ಎಷ್ಟು ಪರಿಯಿಂದ ಬರೆದು ಯಾವ ಪರಿಯಿಂದ ಹಾಡಿದರೂ ಚಂದವೇ ಕಾಣುವದು. ಶ್ರೀ. ರಾಮಭಟ್ಟರು ಬರೆದುದು ಬಹಳ ಸುಲಭ ಷಟ್ಪದಿಯಲ್ಲಿರುವದರಿಂದ ಮಕ್ಕಳಿಗೆ ಪಾಠ ಮಾಡಲಿಕ್ಕೂ ಆಗಾಗ ಅಂದು ತೋರಿಸಲಿಕ್ಕೂ ಬಹಳ ಅನುಕೂಲವಾಗಿದೆ. ಸಣ್ಣಪುಟ್ಟ ಸಮಾರಂಭಗಳಲ್ಲಿ ಹಾಡಿತೋರಿಸಲು ಬರುವಂತಿದೆ.

ಸಂಸ್ಕೃತದಲ್ಲಿ ಬರೆದ ಶ್ರದ್ಧಾಂಜಲಿ ಕೂಡ ಬಹಳ ಸುಲಭವಿರುವದರಿಂದ ಎಲ್ಲರಿಗೂ ಸಹಜವಾಗಿ ಅರ್ಥವಾಗಬಹುದು. ತಿಳಿಯದವರಿಗೆ ಅರ್ಥವನ್ನು ಕನ್ನಡದಲ್ಲಿ ಕೊಟ್ಟಿರುವರು.

ಈ ಪ್ರಯತ್ನವು ಬಹಳ ಸ್ತುತ್ಯವಾದುದು ಎಂಬುದಕ್ಕೆ ತಿಲಮಾತ್ರ ಸಂಶಯವಿಲ್ಲ. ಎಲ್ಲಿಯೋ ಒಂದು ಮೂಲೆಯಲ್ಲಿರುವ ಒಬ್ಬ ಗಾಂಧೀ ಭಕ್ತನಲ್ಲಿ ಈ ಸ್ಫೂರ್ತಿಯ ಸೆಲೆಯೊಡೆದು ಅವನು ಇಷ್ಟೊಂದು ಸುಂದರವಾದ ಚಿಕ್ಕ ಕಾವ್ಯವನ್ನು ಪ್ರಕಟಿಸುತಿರುವದು ಸರಸ್ವತಿಯ ಪ್ರಸಾದವೇ ಎಂದು ಹೇಳಬಹುದು. ಇದು ಎಲ್ಲ ಕನ್ನಡಿಗರಿಗೂ ಸಲ್ಲಲಿ ಎಂದು ನಾನು ಹಾರೈಸುವೆ.

ನವದಿಲ್ಲಿ
ತಾ. ೧೭-೬-೪೯

ರಂಗನಾಥ ದಿವಾಕರ

# ಪ್ರಸ್ತಾವನೆ

ಮಹಾತ್ಮಾ ಗಾಂಧಿಯವರು ಒಬ್ಬ ಯುಗಪುರುಷರೆಂಬುವದು ಎಲ್ಲರೂ ಬಲ್ಲ ಮಾತು. ಇಂಥವರ ಆದರ್ಶ ಚರಿತ್ರೆಯನ್ನು ಆಯಾ ಕಾಲೀನ ಕವಿಗಳು ಇತಿಹಾಸಕಾರರು ಬರೆದಿಡುವದು ಪುರಾತನದಿಂದ ನಡೆದು ಬಂದ ವಿಷಯ.

ಪ್ರಕೃತದಲ್ಲಿ ನಮ್ಮ ಭಾರತವನ್ನು ಪರದೇಶೀಯರು ಆಳುತ್ತ ನಮ್ಮ ಆರ್ಥಿಕ ರಾಜಕೀಯ ಸಾಮಾಜಿಕ ಉನ್ನತಿಯನ್ನು ಮಾಡಿಕೊಳ್ಳಲು ಬರದಂತಾಗಿರಲು ಮಹಾತ್ಮರು ಜನ್ಮವೆತ್ತಿ ಪರದೇಶೀಯರೊಡನೆ ಶಾಂತಿಯುದ್ಧ ಹೂಡಿ ಅಹಿಂಸೆಯಿಂದಲೇ ರಾಜಕೀಯ ಸ್ವಾತಂತ್ರ್ಯವನ್ನು ಗಳಿಸಿಕೊಟ್ಟರು. ಆರ್ಥಿಕ ಸಾಮಾಜಿಕ ಉನ್ನತಿಯ ಬಗೆಗೂ ಮಾರ್ಗದರ್ಶನ ಮಾಡಿದರು.

ಇಂಥವರ ಆಕಸ್ಮಿಕ ವಿಯೋಗದ ಸುದ್ದಿಯನ್ನು ಕೇಳಿದ ಕೂಡಲೇ ನನ್ನ ಮನಸ್ಸಿನಲ್ಲಿ ಅವರ ವಿಷಯವಾಗಿ ಕೆಲವು ಸಂಸ್ಕೃತ ಶ್ಲೋಕಗಳು ಸ್ಫೂರ್ತಿಗೊಂಡವು. ಅವೇ "ಶ್ರದ್ಧಾಂಜಲಿ"

ನಂತರ ಕೆಲವು ದಿನಗಳಲ್ಲಿ ಗಾಂಧಿಯವರ ಜೀವನ ಚರಿತ್ರೆಯನ್ನು ಬರೆಯಬೇಕೆಂದು ಪ್ರೇರಣೆಯಾಗಿ ಕನ್ನಡದ ಭಾಮಿನೀ ಷಟ್ಪದಿಯಲ್ಲಿ "ಗಾಂಧೀ ಚರಿತ್ರೆ" ಎಂಬ ಈ ಚಿಕ್ಕ ಕಾವ್ಯವನ್ನು ಬರೆದೆನು.

ಈ ಪುಸ್ತಕವನ್ನು ಶ್ರೀ. ರಂಗನಾಥ ದಿವಾಕರ (ಕೇಂದ್ರ ಸುದ್ದಿಶಾಖೆಯ ಮಂತ್ರಿ) ಇವರು ಜೋಗಕ್ಕೆ ಆಗಮಿಸಿದಾಗ ಅವರ ಸಮ್ಮುಖದಲ್ಲಿ ಓದಿ ಹೇಳಿ ಒಪ್ಪಿಸಿದ್ದೆ; ಅವರು ಅದನ್ನು ಪರಾಂಬರಿಸಿ ತಮ್ಮ ಬಹುಮೌಲ್ಯದ ಮುನ್ನುಡಿಯನ್ನು ದಯಪಾಲಿಸಿದರು.

ಈ ಬಗ್ಗೆ ಮಹಾನುಭಾವರಾದ ಶ್ರೀ. ರಂಗನಾಥ ದಿವಾಕರರನ್ನು ಹೃತ್ಪೂರ್ವಕ ಅಭಿನಂದಿಸುವೆನಲ್ಲದೆ ಮುದ್ರಣದ ಬಗ್ಗೆ ಧನಸಹಾಯ ಮಾಡಿದ ಮಹನೀಯರಿಗೂ ತುಂಬ ಋಣಿಯಾಗಿರುತ್ತೇನೆ.

ಇದನ್ನು ಎಲ್ಲ ಕನ್ನಡಿಗರೂ ಓದಿ ನೋಡಿ ಪ್ರೋತ್ಸಾಹಿಸುವರೆಂದು ನಂಬಿದ್ದೇನೆ.

ವಿಜಯ ದಶಮಿ<br>ವಿರೋಧಿ ಸಂ. ೧೮೭೧ }

ತಮ್ಮ<br>**ರಾಮಭಟ್ಟ** (ಲೇಖಕ)

# ಮ. ಗಾಂಧೀಜಿಯವರ ಚರಿತ್ರೆ

## ಪೂರ್ವ ಖಂಡ

ಇಂದುಮೌಳಿಯ ಸುತನ ನೆನೆಯುತೆ ।
ಚೆಂದದಿಂ ಶಾರದೆಗೆ ನಮಿಸುತೆ ।
ಬಂಧ ಬಿಡಿಸುವ ಪರಮಗುರುವರನಡಿಯ ಧ್ಯಾನಿಸುತೆ ॥

ತಂದೆಯೆನಿಸಿ ಸ್ವತಂತ್ರ ರಾಷ್ಟ್ರಕೆ ।
ಬಂಧುವೆನಿಸಿ ಸಮಸ್ತಲೋಕಕೆ ।
ಸಂದ ಪರಮ ವಿಭೂತಿಯಹ ಗುರು ಗಾಂಧಿ ಚರಿತೆಯನು ॥ ೧ ॥

ಅಂದದಲಿ ವಿವರಿಸುವೆ ಕೇಳಿರಿ ।
ಬಂಧು ಭಗಿನಿಯರೇಕಚಿತ್ತದಿ ।
ಕುಂದು ಕೊರತೆಗಳನ್ನು ಮನ್ನಿಸಿ ಹಂಸಕ್ಷೀರವೊಲು ॥

ಪೊಂದಿರ್ಪೈಯಿದ ಕೇಳಿ ಧರ್ಮದ ।
ಸಿಂಧುಮಥನದಲುದಿಸಿದಮೃತದ ।
ಬಿಂದುವಿಗೆ ಸಮವೆನಿಪ ಸತ್ಯಾಹಿಂಸೆಯನುಭವವ ॥ ೨ ॥

ಆವವ್ರತನಿಷ್ಠೆಯಲಿ ಜನತೆಗೆ ।
ಭಾವಧೈರ್ಯವ ತಂದು ಸಕಲರ ।
ಕಾವಯುಕ್ತಿಯನೊರೆದನೋ ಗಾಂಧೀಮಹಾತುಮನು ॥

ಆವ ಶಸ್ತ್ರದಿ ದಾಸ್ಯವನುಕಡಿ ।
ದಾವ ಭೋಧೆಯ ಸಾರುತಿದ್ದನೋ ।
ಆವರಮಹಿಮ ತತ್ವವನು ವರ್ಣಿಸುವದಸದಳವು ॥ ೩ ॥

ಹಿಂದೆ ಬಹುವತ್ಸರದ ಪೂರ್ವದೊ ।
ಳಂದವಾದೀ ಭರತ ಭೂಮಿಯೊ ।
ಳಿಂದು-ರವಿ-ಯದುವಂಶಜರು ಸದ್ಧರ್ಮದಿಂ ಪ್ರಜೆಯ ॥

ತೊಂದರೆಯ ಪರಿಹರಿಸುತಲಿ ನಿಜ ।
ತಂದೆ ಮಕ್ಕಳ ಪೊರೆಯುವಂದದಿ ।
ಚೆಂದದಿಂ ಪಾಲಿಸುತಲಿದ್ದರು ಶ್ರೇಷ್ಠ ನೃಪತಿಗಳು ॥ ೪ ॥

ಕನಸಿನಲಿ ಮುನಿಗಿತ್ತವಚನವ ।
ದನೃತವಾಗದ ತೆರದಿ ವೈಭವ ।
ವನು ತೊರೆದು ಸತಿಸುತ ಸಹಿತ ತಾ ಕಾಶಿಗೈತಂದು ॥

ತನುವ ಹೊಲೆಯಗೆ ಮಾರಿ ತನ್ನಯ ।
ವನಿತೆಯನು ವಿಕ್ರಯಿಸಿ ವಿಪ್ರಗೆ !
ಮುನಿಗೆ ದಕ್ಷಿಣೆಯಿತ್ತು ಪ್ರೇಮದಿ ಸತ್ಯಪಾಲಿಸಿದ ॥ ೫ ॥

ಸದ್ಧರಿಶ್ಚಂದ್ರಾಧಿಪನು ಮೇ- ।
ಣುದ್ಧರಿಸೆ ಸದ್ಧರ್ಮವನು ತಾವ್ ।
ಬದ್ಧಕಂಕಣರಾದ ಶಿಬಿ-ರಘುರಾಮಮೊದಲಾದ ॥

ಶುದ್ಧಕ್ಷತ್ರಿಯರಾಳೆ ಸಕಲಸ ।
ಮೃದ್ಧರಾಷ್ಟ್ರವದಾವದೆನಿತೋ ।
ಬುದ್ಧ-ಶಂಕರರಾವ ರಾಷ್ಟ್ರದಿ ಜನ್ಮತಾಳಿದರೊ ॥ ೬ ॥

ಗಂಗೆಯಮುನಾ ಸಿಂಧು ಗೋಮತಿ ।
ತುಂಗಭದ್ರಾ ಮೇಣ್ ಸರಸ್ವತಿ ।
ತಂಗಿ ನೆಲದಲಿ ಸಕಲ ಫಲಗಳನೀವ ಕಾವೇರಿ ॥

ಸಂಗಮದಿ ನೆರೆಸ್ನಾನಗೈವವ- ।
ರಂಗ ಶುದ್ಧಿಯಗೈದು ದುರಿತವ ।
ಭಂಗಿಸುವ ವರ ಪುಣ್ಯನದಿಗಳದೆಲ್ಲಿ ಹರಿದಿಹವೋ ॥ ೭ ॥

ಎಲ್ಲಿ ಮಾರುತಿ•ಭೀಷ್ಮ ಮೊದಲಹ।
ಕೆಲ್ಲರಿಗೆ ಸದ್ಬ್ರಹ್ಮಚರ್ಯದ।
ಎಲ್ಲೆಯನು ತೋರಿದರೊ ಸ್ವಾನುಷ್ಠಾನಬಲದಿಂದೆ ॥

ಎಲ್ಲಿ ಸೀತಾ-ತಾರೆ ದ್ರೌಪದಿ ।
ಎಲ್ಲಹಲ್ಯಾದೇವಿಯರು ಮಿಗೆ ।
ನಲ್ಲೆಯರಿಗಾದರ್ಶರಾದರೊ ಪತಿಪರಾಯಣರು ॥ ೮ ॥

ಎಲ್ಲಿ ನವರತ್ನಗಳ ಖಣಿಗಳ- ।
ದೆಲ್ಲಿ ಮೌಕ್ತಿಕರಾಶಿಗಳೊ ಮೇ- ।
ಣೆಲ್ಲಿನಾನಾ ಧಾನ್ಯಫಲಮೂಲಗಳ ಸಂಚಯವೊ ॥

ಎಲ್ಲಿ ನಾನಾ ಲೋಹ-ಖನಿಜಗ ।
ಳೆಲ್ಲಿ ಗೋತುರಗಾದಿ ಪಶುತತಿ ।
ಪಲ್ಲವಿತ ಚೂತಾದಿವೃಕ್ಷಗಳೆಲ್ಲಿ ನೆಲಸಿಹವೊ ॥ ೯ ॥

ಇಂತೆಸೆವ ಸಂಪತ್ತಿನಿಂ ಸಲೆ ।
ಸಂತಸದೊಳೀ ಭಾರತೀಯರು ।
ಚಿಂತೆಯಿಲ್ಲದೆ ಕಳೆಯುತಿದ್ದರು ದಿನವ ವೈಭವದಿ ॥

ಕಂತುಹರನಡಿ ಚಿಂತನವು ಮೇಣ್ ।
ಕಂತುಪಿತನಡಿ ಚಿಂತೆಯಲ್ಲದ- ।
ಲಂತರಂಗದಲಾವ ವಿಷಯದ ಚಿಂತೆಯಿಲ್ಲದಲೆ ॥ ೧೦ ॥

ಮುಂದೆ ಕೆಲದಿನಗಳಲಿ ಯವನರು ।
ಬಂದು ಧನದಾಶೆಯಲಿ ರಾಜರ ।
ಕೊಂದು ರಾಜ್ಯವನಾಳುತಿದ್ದರು ಸೈನ್ಯಬಲದಿಂದ ॥

ಅಂದು ಶಿವ ರಾಣಾ ಪ್ರತಾಪರು ।
ಬಂಧು ಹರಿಹರ ಮಾಧವಾರ್ಯರು ।
ಒಂದುಗೂಡಿಸಿ ಸೈನ್ಯವನು ಮೇಣಾಯುಧಾದಿಗಳ ॥ ೧೧ ॥

ಕೊಂದು ಯವನರ ಬಲವಸಮರದಿ ।
ತಂದು ಸ್ವಾತಂತ್ರ್ಯವನು ಜನತೆಗೆ ।
ಹಿಂದುಧರ್ಮವನುದ್ಧರಿಸಿದರು ಪುಣ್ಯಶಾಲಿಗಳು ॥

ಅಂದಿನಿಂ ತಾವ್ ಮಹಮದೀಯರು ।
ಹಿಂದುಗಳು ತಾವೆಂಬ ಭಾವವ ।
ನೊಂದು ಹಂಬಲಿಸದಲೆ ಪ್ರೇಮದೊಳಿಲ್ಲರಿರುತಿರಲು ॥ ೧೨ ॥

ಬಂದರೈ ಪಾಶ್ಚಾತ್ಯರರಸುತ ।
ತಂದ ವಸ್ತುಗಳನ್ನು ಮಾರಲ ।
ದೊಂದುಸ್ಥಳವನು ಕೊಂಡುಕೊಂಡರು ಬಾದಶಹನಿಂದ ॥

ಮುಂದಮುಂದದಿ ಸೈನ್ಯವನು ತಾವ್ ।
ತಂದು ಧನುವನು ಕಾಯ್ವನೆವದಿಂ ।
ಸಂದುನೋಡುತಲಿದ್ದರೈ ರಾಜ್ಯವನು ಸೆಳೆವುದಕೇ ॥ ೧೩ ॥

ಅಂತು ರಾಸಾಯನಿಕ ಭೌತಿಕ ।
ಯಾಂತ್ರಿಕಾಸ್ತ್ರಾದಿಗಳ ಬಲದಲಿ ।
ತಂತ್ರದಿಂದಾಹವವ ರಚಿಸಿದರೊಬ್ಬರೊಬ್ಬರೊಳು ॥

ಕುಂತ-ಖಡ್ಗಾಂಕುಶ-ಸಮರವಿದ ।
ರೆಂತು ಸೈರಿಸಲಹರು ಕಡೆಯೊಳ ।
ಗಂತಕನ ಸದನವನು ಸೇರಿದರಾಗನವ್ಮರವರು ॥ ೧೪ ॥

ಇಂತು ಭೇದೋಪಾಯದಲಿಸಾ ।
ಮಂತ ರಾಜರನೆಲ್ಲ ಗೆಲಿದು ನಿ ।
ರಂತರಾಯದಿ ರಾಜ್ಯವಾಳಲುಪಕ್ರಮಿಸಿ ಜನರ ॥

ಸ್ವಂತ ನಾಗರಿಕಾಧಿಕಾರವ- ।
ನಂತಕೌಟಿಲ್ಯದಲಿ ಸೆಳೆಯುತ ।
ತಂತುವನು ಪಿಡಿದಿದ್ದು ರಾಜ್ಯವನಾಂಗ್ಲರಾಳಿದರು ॥ ೧೫ ॥

ಕೆಲವು ದಿನಗಳು ಕಳೆಯಲಾಂಗ್ಲರ ।
ಕಲಹಕೆಬ್ಬಿಸಿ ಕೆಲನರೇಂದ್ರರು ।
ಬಲವನೆಲ್ಲವ ಕಳೆದುಕೊಂಡರು ರಾಜ್ಯವುಳಿಪುದಕೇ ॥

ಸುಲಭವಲ್ಲವದೆಂದು ಭಾವಿಸಿ ।
ತಲೆಯ ಬಗ್ಗಿಸಿ ತಮ್ಮರಾಜ್ಯವ ।
ಕೆಲರು ಪಡೆದರು ಕಪ್ಪವನು ನೀಡುತ್ತ ವಿನಯದಲೀ ॥ ೧೬ ॥

ಗುರುಕುಲದಿ ಸುಖ ದುಃಖ ಸಹಿಸುತ ।
ಪರಮ ವೇದಾಧ್ಯಯನ ಮಾಡುವ ।
ವರವೆನಿಪ ವಿದ್ಯಾಧ್ಯಯನ ಪದ್ಧತಿಯನುರೆ ಮರೆಸಿ ॥

ಅರಮನೆಯ ಸರಿ ಪೋಲ್ವ ಭವನದೊ ।
ಳುರುವಿಲಾಸದ ವಸ್ತುಸಂಗ್ರಹ ।
ತರುಣಿಯರ ಸಹವಾಸದಲಿ ವಿದ್ಯಾರ್ಥಿಯರ ಮನವ ॥ ೧೭ ॥

ಮರುಳು ಮಾಡುತ ನೀತಿ ಬಾಹ್ಯದ ।
ಪರಿಪರಿಯ ಆಂಗ್ಲೇಯ ವಿದ್ಯೆಯ ।
ನರಿವುದಕೆ ನೆರವಿತ್ತು ಸಕಲರ ರಾಜ್ಯಕಾರ್ಯದಲಿ ॥

ಸೇರಿ ಸೇವಕತನದಿ ಜೀವನ ।
ಪಾರುಗಾಣುವದಲ್ಲದಲೆ ಮಿಗೆ ।
ಬೇರೆ ದಾರಿಯನರಿಯದಂದದಿ ರಚಿಸಿದರು ಜನರ ॥ ೧೮ ॥

ಭತ್ತವನ್ನೊಡೆಯಲಿಕೆ ಯಂತ್ರವ ।
ಹತ್ತಿಯನು ಸೋಸಲಿಕೆ ಯಂತ್ರವ ।
ಮತ್ತೆ ನೂಲುವ ನೇಯ್ವ ನಾನಾ ಯಂತ್ರ ಸಾಧನವ ॥

ಎತ್ತು ಕುದುರೆಯಗತ್ಯವಿಲ್ಲದೆ ।
ಹೊತ್ತು ಪೋಗುವ ಧೂಮ-ಶಕಟವ ।
ಮತ್ತೆ ಮಿಂಚಿನ ಶಕ್ತಿಯಿಂ ವಿಧವಿಧದ ಸಾಧನವ ॥ ೧೯ ॥

ಎಲ್ಲ ಕಾರ್ಯಕೆ ಯಂತ್ರ ರಚಿಸುತ- ।
ಲೆಲ್ಲರಿಗೆ ಸೌಕರ್ಯ ತೋರುತ ।
ಮೆಲ್ಲಮೆಲ್ಲನೆ ಜನರ ಸೋಮಾರಿಗಳ ಗೆಯ್ಯುತಲಿ ॥

ಬಲ್ಲ ಕೈಗಾರಿಕೆಯ ಬುದ್ಧಿಯ- ।
ನೆಲ್ಲ ನಾಶಿಸಿ ಸಕಲ ಜನತೆಗೆ ।
ಎಲ್ಲೆಯಿಲ್ಲದ ವೆಚ್ಚದಲಿ ದಾರಿದ್ರ್ಯವನು ತಂದು ॥ ೨೦ ॥

ಸ್ತ್ರೀಯರೊಡನಾಟವನು ಮಾದಕ ।
ಪೇಯವನು ಸಲೆ ಧೂಮ್ರಪಾನವ ।
ರಾಯರೆನಿಸುವ ಪ್ರಮುಖರೆಲ್ಲರು ಗೈದು ಸಭೆಯೊಳಗೆ ॥

ಹೇಯವೆನಿಸುವಸಭ್ಯ ನಡತೆಯ ।
ನ್ಯಾಯವೆನಿಸುತ ನೀತಿ ಧರ್ಮವ- ।
ಪಾಯಕೀಡನು ಮಾಡಿದರು ಪಾಶ್ಚಾತ್ಯರೆಲ್ಲರೊಳು ॥ ೨೧ ॥

ವೇದಶಾಸ್ತ್ರಪುರಾಣದರ್ಥವ ।
ನೋದಿ ತಿಳಿಯದಲಿರಲು ದ್ರಾಕ್ಷೆಯ ।
ಮೂದಲಿಪ ಹುಳಿಯೆಂದು ನರಿತೆರದಾರ್ಯ ಧರ್ಮವನು ॥

ಬೋಧೆಯಿಲ್ಲದ ಹಳೆಯ ವೃದ್ಧರು ।
ಬೋಧಿಸಿದ ಕೃತಿಯೆಂದು ಜನರೊಳು ।
ಭೇದಬುದ್ಧಿಯ ಜನಿಸಿ ಧರ್ಮ ಶ್ರದ್ಧೆಯಳಿಸಿದರು ॥ ೨೨ ॥

ಉಪ್ಪು ನೀರಿಗೆ ಸುಂಕವೆತ್ತುತ ।
ಸಪ್ಪು ಕಾನೊಳಗಿಂದ ತರಲಿಕೆ ।
ಕಪ್ಪವನು ಹೇರಿದರು ಧನವನು ಸಂಗ್ರಹಿಸಲಿಂತು ॥

ತಪ್ಪು ಕರಭಾರದಲಿ ಪ್ರಜೆಗಳ ।
ನೊಪ್ಪಿಸುತ ಯುಕುತಿಯಲಿ ಜಿಗಳೆಯು ।
ಸಪ್ಪಳಿಲ್ಲದೆ ರಕ್ತ ಹೀರುವ ತೆರದಿ ಹೀರಿದರು ॥ ೨೩ ॥

ಬುದ್ಧಿಯಿಲ್ಲದ ಧನಿಕರನು ತಾವ್ ।
ಸುದ್ದಿಯಿಲ್ಲದೆ ಮಂತ್ರಿ ಪದದಿಂ ।
ಬದ್ಧರನು ಮಾಡುತ್ತ ತಮಗನುಕೂಲ ಶಾಸನವ ॥
ತಿದ್ದಿ ಮಂತ್ರಿಗಳನುಮತಿಯ ಪಡೆ ।
ದಿದ್ದೆನುತ ಜನಗಳಿಗೆ ತಿಳಿಸುತ ।
ಲಿದ್ದು ಮೋಹಿಸಿ ಜನರನಾಳುತಲಿದ್ದರವರಾಗ ॥ ೧೪ ॥

ಈ ತೆರದಲಾರ್ಥಿಕತೆ ಧಾರ್ಮಿಕ ।
ಘಾತವೆಸಗುತ ರಾಜಕೀಯದ ।
ಖ್ಯಾತವಾದಧಿಕಾರಿಗಳ ತಮ್ಮವರ ನಿರಿಸುತಿರೇ ॥
ಮಾತನಾಡ್ವಧಿಕಾರವಿಲ್ಲದೆ ।
ಸೋತು ದೈನ್ಯದಿ ದಾಸರಂದದ ।
ಲಾತುಕೊಳ್ವವರಿಲ್ಲದಾದರು ಭಾರತೀಯರಿಗೇ ॥ ೧೫ ॥

ಅರಿಯದುತ್ತರಕ್ಷಣದಿ ತನ್ನಯ ।
ಶಿರವತರಿವುದನಜವು ಹರ್ಷದೊ ।
ಳಿರುತ ತೋರಣ ತಳಿರು ಮೆಲ್ಲುತಲಿರುವ ತೆರನಾಗೀ ॥
ಪರಿಪರಿಯ ಸೌಕರ್ಯಸಾಧನ ।
ದೊರೆಯುತಿರೆ ದಾಸತ್ವದುಃಖದ ।
ಪರಿವೆಯಿಲ್ಲದೆ ಸುಖವಿದೆನುತಲಿ ಭಾವಿಸಿದರಿವರು ॥ ೧೬ ॥

ಈ ತೆರಡ ಪರದಾಸ್ಯದಿಂದ ವಿ ।
ಘಾತವಾಗುವ ಚರಿತು ರಾಜ್ಯಕೆ ।
ನೀತಿಶಾಸ್ತ್ರವನರಿತ ದಾದಾಭಾಯಿ ನವರೋಜೀ ।
ಖ್ಯಾತರಾಗಿಹ ಬಾಳ ಟಿಲಕರು ।
ಪ್ರೀತಿಯಿಂ ಭಾರತದ ಜನತೆಗೆ ।
ರೀತಿಯನು ಬೋಧಿಸಲುಪಕ್ರಮಿಸಿದರು ಬಿಡುಗಡೆಯ ॥ ೧೭ ॥

ಲೋಕಮಾನ್ಯತೆ ಪಡೆದು ಬಿಳಿಯರ ।
ಲೋಕವಂಚಕತನವ ಬಯಲಿಗೆ ।
ನೂಕುತಲಿ ಜಾಗ್ರತಿಯಗೊಳಿಸಿದರೆಲ್ಲ ಜನತೆಯಲೀ ॥

ಸಾಕು ಸಾಕೀ ಪಾರತಂತ್ರ್ಯವು ।
ಬೇಕು ಸ್ವಾತಂತ್ರ್ಯವದು ಎಂಬವಿ ।
ವೇಕ ಪೊಂದಲು ಪರಿಪರಿಯ ಯತ್ನವನು ಮಾಡಿದರು ॥ ೨೮ ॥

ಕೆಲರು ಶಿಕ್ಷೆಯ ಭೀತಿಯಲಿ ಹಲ ।
ಕೆಲವರೌದಾಸೀನ್ಯದಲಿ ಮೇಣ್ ।
ಕೆಲರು ರಾಜದ್ರೋಹ ಪಾಪದ ಭೀತಿಯನು ತಳೆದೂ ॥

ಕೆಲರು ರಾಜಾನ್ನಗಳ ಹಂಗಿಲಿ ।
ಕೆಲರು ದಾಕ್ಷಿಣ್ಯದಲಿ ತಮಗೆಯು ।
ಬಲುಮೆಯಿಂದಿತ್ತಿರುವ ನಾನಾ ಪದವಿ ಬಿರುದುಗಳ ॥ ೨೯ ॥

ಎಷ್ಟು ವಿಧದಲಿ ತಿಳಿಸಿ ಹೇಳಿದ ।
ರಿಷ್ಟ ಪಡದಿರೆ ವ್ಲೋಂಥ ಜನರೊಳು ।
ನಿಷ್ಟುರವ ತಳೆವುದಕೆ ನಾನಾ ಕಾರಣಗಳಿಂದ ॥

ಕಷ್ಟಪಟ್ಟಾ **ತಿಲಕ**ರಾಗಲೆ ।
ಸ್ಪಷ್ಟ ಪಡಿಸುತ ದಾಸತನವನು ।
ನಷ್ಟಪಡಿಸುವ ಪರಿಯ ಮನದಲಿ ಯೋಚಿಸುತಲಿರಲು ॥ ೩೦ ॥

## ಮಧ್ಯಮ ಖಂಡ

ಇಷ್ಟರೊಳು ಗುಜರಾಥ ದೇಶದಿ ।
ಶ್ರೇಷ್ಠ ಪೋರ್ಬಂದರದಿ ಸಚಿವವ ।
ರಿಷ್ಟನೆನಿಪಾ ಕರಮಚಂದಿರ ಗಾಂಧಿಯವರಿಂದ ॥

ಶಿಷ್ಟೆ ಪುಥಲೀಬಾಯಿ ಗರ್ಭದೊ ।
ಳಿಷ್ಟ ಸಂಪದದಿರವೆನಿಪ ಪುರ ।
ಕಷ್ಟ ನಾಶಕನಾದ ವರಸುಕುಮಾರಕನುಜನಿಸಿ ॥ ೩೧ ॥

ಮುಂದೆ ಮೋಹನದಾಸನೆನುತಲಿ ।
ಬಂಧು ಜನರಿಂ ಕರೆಸಿಕೊಳುತಲಿ ।
ತಂದೆ ತಾಯ್ಗಳ ಹರುಷಗೊಳಿಸಿ ಸುರೂಪ ಸದ್ಗುಣದಿಃ ॥
ಪೊಂದಿ ಕೌಮಾರ್ಯದಲೆ ಪ್ರೀತಿಯ ॥
ತಂದೆಯವಿಯೋಗವನು ಗಾಂಧಿಯು ।
ಬಂಧುವರ್ಗಗಳಿಂದ ಪಾಲಿತನಾಗಿ ಕೆಲದಿನದಿಃ ॥ ೩೨ ॥

ಚದುರತನದಲಿ ಕಲಿತು ವಿದ್ಯೆಯ ।
ಮುದದಿ ಕಸ್ತುರಿಬಾಯಿಯೆಂಬುವ ।
ವಧುವನಂಗೀಕರಿಸಿ ಗಾರ್ಹಸ್ಥ್ಯವನು ಪಾಲಿಸುತ ॥
ಸದಮಲ-ಪ್ರೇಮದಲಿ ಸಾಧ್ವಿಯು ।
ಒದಗಿಸಿದ ಸೇವೆಯನು ಕೊಳ್ಳುತ ।
ಮುದದಲಿರೆ ಕುಲತಿಲಕನಹವರ ಪುತ್ರನನು ಪಡೆದು ॥ ೩೩ ॥

ಓದಲಾಂಗ್ಲರ ಭಾಷೆಯನು ತಾ ।
ಪೋದುದಲ್ಲದಲಾಂಗ್ಲ ದೇಶಕೆ ।
ಜೋದಿಗವ ಪಡುವಂತೆ ಶೀಘ್ರದೊಳೆಲ್ಲವನು ಕಲಿತು ॥
ಸಾದರದಿ ಭಾರತಕೆ ಬರುತಲೆ ।
ವೇದನೆಯ ಜನನಿಯ ವಿಯೋಗದ ।
ಲಾದುದನು ಸಹಿಸುತಲಿ ಕೆಲದಿನವಿದ್ದು ಭಾರತದಿ ॥ ೩೪ ॥

ಶ್ರೇಷ್ಠವರ್ಗವನುತ್ತರಿಸಿ ಬ್ಯಾ- ।
ರಿಷ್ಟರೆಂಬುವ ಪದವ ಪಡೆದು ವ- ।
ರಿಷ್ಟರೆನಿಸಾಫ್ರಿಕೆಯೊಳಿದ್ದು ವಕೀಲಿ ಕೆಲಸದಲಿ ॥
ನಿಷ್ಠೆಯಿಂ ಜನ ಹಿತವ ಸಾಧಿಸ- ।
ಲಿಷ್ಟಪಡುತಲಿ ನ್ಯಾಯದಿಂದಲಿ ।
ಕಷ್ಟಪಡುವವರನ್ನು ಕನಿಕರದಿಂದ ನೋಡುತಲಿ ॥ ೩೫ ॥

ದಕ್ಷಿಣಾಫ್ರಿಕೆಯೊಳಗೆ ಕರಿಯರ ।
ನೀಕ್ಷಿಸುತ ತೊಳಲುವರ ದಾಸ್ಯದಿ ।
ರಕ್ಷಿಸಲ್ ಸ್ವಾತಂತ್ರ್ಯ ಕೊಡಿಸುತ ವೀರ ಮೋಹನನು ॥
ಲಕ್ಷ್ಯವಿಲ್ಲದೆ ಬಿಳಿಯ ಜನರ ವಿ ।
ಪಕ್ಷ ರಚಿಸುತ ಶಾಂತಿಯುದ್ಧದಿ ।
ಮೋಕ್ಷಗೊಳಿಸಿದನವರ ಪರತಂತ್ರತೆಯ ಬಂಧನದಿಂ ॥ ೩೬ ॥

ಜನರ ಮನವನು ನೋಯಿಸದೆ ತಾವ್ ।
ಧನವನಾರ್ಜಿಸಿ ನ್ಯಾಯದಿಂದಲಿ ।
ವನಿತೆ ಕಸ್ತೂರಿಯೊಡನೆ ಸುಖದಿಂದಿರಲು ಕೆಲದಿನವು ॥
ಅನುಜರನು ನೋಡಲಿಕೆ ತನ್ನಯ ।
ಮನದಿ ಯೋಚಿಸಿ ಮಾತೃ ಭೂಮಿಗೆ ।
ಅನುನಯದಿ ಬಂದುಳಿದು ಕೆಲದಿನಗಳೆಯಲಾಫ್ರಿಕದಿ ॥ ೩೭ ॥

ಕೆಟ್ಟ ರೀತಿಲಿ ಭಾರತೀಯರ ।
ಗಟ್ಟಳಿಯ ಕೊಡುವುದನು ಬಿಡಿಸಲು ।
ಕಟ್ಟಿ ಟೊಂಕವನಲ್ಲಿ ವಾಸಿಪ ಭಾರತೀಯರನು ॥
ಒಟ್ಟುಗೂಡಿಸಿ ಶಾಂತಿಯುದ್ಧದ-।
ಲಿಟ್ಟಿಗೆಯ ಕಲ್ಲುಗಳ ಲಾಠಿಯ ।
ಪೆಟ್ಟ ಸಹಿಸುತ ಕಾದು ಸ್ವಾತಂತ್ರ್ಯವನು ಕೊಡಿಸಿದನು ॥ ೩೮ ॥

ಬೋರ ಯುದ್ಧದಲಾಂಗ್ಲ ಜನರಿಗೆ ।
ಘೋರ ಸಂಕಟಮೊದಗಲಾಕ್ಷಣ ।
ವೈರಮರೆವುತ ತನಗೆ ಸತ್ಯಾಗ್ರಹದಿ ಪೀಡಿಸಿದ ॥
ಸೇರಿಸುತ ಶುಶ್ರೂಷ-ಪಥಕವ ।
ವಾರಿಸುತ ಯುದ್ಧಾಪಘಾತವ ।
ತೋರಿ ದಯೆಯನಜಾತ ಶತ್ರುತ್ವವನು ಪೊಂದುತಲಿ ॥ ೩೯ ॥

ಇಂತು ಹೋರಾಡುತಲಿ ಗಾಂಧಿಯು ।
ಚಿಂತೆ ಹರಿಸಲು ಕರಿಯ ಜನಗಳ ।
ನಿಂತು ಕೂಡಿಸಿ ಶಾಂತಿಯಿಂದಲಿ " ಕರಿಯ ಕಾಯ್ದೆಯನು " ॥

ಹಿಂತೆಗೆದುಕೊಳುವಂತೆ ತಿಳಿಸುತ ।
ಲಂತು "ಜನರಲ್ ಸ್ಮಟ್ಸ"ರೊಡಬಡು ।
ವಂತೆ ಮಾಡಿಯೆ ಮಾತೃಭೂಮಿಗೆ ತಾನು ಪೊರಮಟ್ಟ ॥ ೪೦ ॥

ಬಂದನೈ ಗಾಂಧೀ ಮಹಾತ್ಮನು ।
ಬಂದನೈ ಸ್ವಾತಂತ್ರ್ಯದಾತನು ।
ಬಂದನೈ ಕರುಣಾಳುವೆಮ್ಮಯ ದಾಸ್ಯ ಬಿಡಿಪುದಕೇ ॥

ಎಂದು ನುಡಿಯುವ ದೇಶಭಾಂಧವ ।
ರಿಂದ ದೇಶಾದ್ಯಂತ ಸ್ವಾಗತ ।
ಹೊಂದಿ ಸಂದೇಶವನು ಬೀರಿಯೆ ಶಾಂತಿ ಸಾಧಿಸಲು ॥ ೪೧ ॥

ಸಶ್ರಮದಿ ದೇಶವನು ಚರಿಸುತ ।
ವಿಶ್ರಮಿಸಲೊಂದೆಡೆಗೆ ಕೂಡುತ ।
ಲಾಶ್ರಮವ ಸಾಬರಮತೀ ತೀರದಲಿ ತಾ ತೆರೆದು ॥

ವಿಶ್ರವಸುಸುತನರಿಯು ಪಾದದಿ ।
ಮಿಶ್ರಗೊಳಿಸುತ ಮನವ ಧ್ಯಾನದಿ ।
ಸುಶ್ರುತಿಗೆ ಸಮವೆನಿಪ ಭಗವದ್ಗೀತೆಯೊರೆಯುತಿರೇ ॥ ೪೨ ॥

ಚಂಪವನದಾ ನೀಲಿ ತೋಟದಿ ।
ಕಂಪನಿಯರಾ ರೈತರನ್ನನು- ।
ಕಂಪವಿಲ್ಲದೆ ನಡಿಸಿಕೊಳುತಿರೆ ಯಂತ್ರದಂದದಲಿ ॥

ಕಂಪಿಸುತಲಾ ಜನರು ಗಾಂಧಿಗೆ ।
ಕೆಂಪು ಜನರಟ್ಟುಳಿಯನರುಹಲು ।
ಚಂಪವನಕೈದಿದರು ಸಹಕಾರಿಗಳನೊಡಗೂಡಿ ॥ ೪೩ ॥

ಅಲ್ಲಿ ನಿರ್ದಯದವಳಿಕೆಯ ಕಥೆ ।
ಯೆಲ್ಲ ಸಂಗ್ರಹಿಸುತಲಿ ಜನರಿಂ ।
ದಲ್ಲಿಯಧಿಕಾರಿಯನು ಕಾಣುತ ನ್ಯಾಯವಾದವಲಿ ॥

ಎಲ್ಲವನು ತಪ್ಪೆಂದು ವಪ್ಪಿಸು ।
ತೆಲ್ಲರಿಗೆ ಸುಖವಿತ್ತು ಧೈರ್ಯದ- ।
ಲೆಲ್ಲ ಜನರಾದರವಪಡೆದರು ಗಾಂಧಿಯವರಾಗ ॥ ॥ ೪೪ ॥

ಇನಿತಿರಹವುದಬಾದಗಿರಣಿಯ ।
ಧನಿಗು ಕೂಲಿಯ ಜನರಿಗೂ ವೇ ।
ತನವ ಹೆಚ್ಚಿಪ ವಿಷಯದಲಿ ಮಿಗೆ ಕಲಹವೇಳುತಿರೇ ॥

ಕನಿಕರದಿ ಕೂಲಿಗಳ ಪಕ್ಷವ ।
ನನುಸರಿಸುತುಪವಾಸಗೈಯುತ ।
ಕೊನೆಗೆ ಕೂಲಿಯ ಜನರ ಕಷ್ಟವ ದೂರಮಾಡಿದನು ॥ ೪೫ ॥

ಯುದ್ಧವನು ಮಾಡಲಿಕೆ ಬ್ರಿಟಿಶರೊ ।
ಳೆದ್ದು ಬರುತಿರೆ ಜರ್ಮನರು ತಾವ್ ।
ಮದ್ದು ಗುಂಡು ತುಫಾಕಿ ತೋಫುಗಳನ್ನು ಸಂಗ್ರಹಿಸಿ ॥

ಸಿದ್ಧರಾಗಲಿಕಾಗ ಬ್ರಿಟಿಶರು ।
ಮದ್ದು ಜನ ಧಾನ್ಯಾದಿಗಳ ತಾವ್ ।
ಸಿದ್ಧಮಾಡಲು ಭಾರತೀಯರನೆಬ್ಬಿಸುತಲಿರಲು ॥ ೪೬ ॥

ಸಂದುಸಾಧಿಸಿ ಮಣಿಸಲಾಂಗ್ಲರ ।
ತೊಂದರೆಯ ಕಾಲದಲಿ ಜನರನು ।
ವಂದುಗೂಡಿಸಿ ತಮ್ಮರಾಜ್ಯವ ತಿರುಗಿ ಪಡೆವುದಕೇ ॥

ಮುಂದ ಮಾಡುವ ಜನಸಹಾಯವ ।
ನೊಂದುಕೊಡದಲೆ ಬ್ರಿಟಿಶರಿಗೆ ತಾ ।
ವೊಂದು ಯುಕುತಿಯ ಯೋಚಿಸಿದರಾ ಟಿಲಕರಾಕ್ಷಣದೀ ॥ ೪೭ ॥

ಬಂದು ನೋಡುತ ಭಾರತೀಯರ ।
ಬಂಧನವ ಮೇಣಾಂಗ್ಲ ಜನತೆಯ ।
ಗೊಂದಲವ ನೋಡುತ್ತ ಮನದಲಿ ಕನಿಕರವ ಪಟ್ಟು ॥

ತೊಂದರೆಯ ಕಾಲದಲಿ ಪೀಡಿಪು ।
ದಂದವಲ್ಲವು ಭಾರತೀಯರಿ ।
ಗೆಂದು ಯುದ್ಧಸಹಾಯ ನೀಡಲು ಮನವ ಮಾಡಿದನು ॥ ೪೮ ॥

ಬಳಿಕ ವ್ಲೇಂಛರು ಯುದ್ಧದಲಿ ಜಯ ।
ಫಳಿಸಿ ಭಾರತ ಜನಸಹಾಯದ ।
ಲುಳಿಸಿಕೊಂಡರು ತಮ್ಮ ಸಾಮ್ರಾಟ್ಪದವ ಯುಕುತಿಯಲಿ ॥

ಆಳುತಿರಲಾಂಗ್ಲರನು ಗಾಂಧಿಯು ।
ಕೇಳಿದನು ಸ್ವಾಯತ್ತ ಸತ್ತೆಯೊ ।
ಳಾಳುವೆವು ನಾವ್ ನಮ್ಮ ರಾಜ್ಯವನೀಗ ಕೊಡಿರೆಂದು ॥ ೪೯ ॥

ಹಂಬಲಿಸದುಪಕೃತಿಯ ಯುದ್ಧದಿ ।
ಬೆಂಬಲವನಿತ್ತಿರುವ ಜನರ ವಿ- ।
ಲಂಬದಿಂದೀಯುವೆವು ನಿಮ್ಮಯ ರಾಜ್ಯವೆಲ್ಲವನು ॥

ಎಂಬ ಭರವಸೆಯಿತ್ತಪೂರ್ಣತೆ ।
ಗೊಂಬ ಕೆಲವಧಿಕಾರಗಳ ತಾ- ।
ವುಂಬಳಿಯ ಕೊಡುವುದಕೆ ಮನವನು ಮಾಡಿ ತೋರುತಲಿ ॥೫೦॥

ಹಿಂದು ಮುಸ್ಲಿಮರೆಂಬ ಭೇದವ ।
ತಂದು ತಮ್ಮಯ ಭೇದ ನೀತಿಲಿ ।
ಹಿಂದುಳಿದ ವರ್ಗವಿದು ಮೇಣಸ್ಪೃಶ್ಯರಿವರೆಂಬ ॥

ಗೊಂದಲವನೆಬ್ಬಿಸುತ ಸಂಸ್ಕೃತಿ ।
ಯಿಂದ ಬಂದಿಹ ಭೇದವನು ತಾವ್ ।
ತಂದು ಸೇರಿಸಿ ರಾಜಕಾರಣಗಳಲಿ ಯುಕುತಿಯಲಿ ॥ ೫೧ ॥

ಒಂದುಗೂಡದ ತೆರದಿ ಜನರೊಳು ।
ಕುಂದನೆಣಿಸುತಲೊಬ್ಬಲೊಬ್ಬರ ।
ತೊಂದರೆಯನೊಡ್ಡುತಲಿ ರಾಜ್ಯವನಾಗಕೊಡುವುದಕೆ ॥
ಒಂದುಗೂಡಿಯೆ ಜಾತಿಭೇದವ ।
ನೊಂದನೆಣಿಸದೆ ಭಾರತೀಯರು ।
ಬಂದು ಕೇಳಿದರೀಯುವೆವು ತಾವೆಂದು ಪೇಳಿದರು ॥ ೫೨ ॥

ನಿಮ್ಮೊಳಿಂತೀ ಜಾತಿಭಿನ್ನತೆ ।
ಯುಮ್ಮಳಿಸೆ ರಾಜ್ಯಾಧಿಕಾರವ ।
ನೊಮ್ಮೆಲೇ ನೀಡಿದೊಡೆ ರಾಜ್ಯವನಾಳ್ವಬುದ್ಧಿಯಲಿ ॥
ನಿಮ್ಮ ನಿಮ್ಮೊಳು ಕಲಹವೇಳುತ ।
ಸುಮ್ಮನೇ ಸಾಯುವಿರಿ ಅದರಿಂ ।
ನೆಮ್ಮದಿಯ ಪರಿಯನ್ನು ಪೇಳುವೆವೆಂದು ಪೇಳಿದರು ॥ ೫೩ ॥

ಎಂದ ಮಾತನು ಕೇಳಿ ಗಾಂಧಿಯು ।
ನೊಂದು ಮನದಲಿ ಪಾರತಂತ್ರ್ಯದ ।
ಬಂಧನವ ಬಿಡಿಪುದಕೆ ನಾನಾ ಯುಕ್ತಿ ಯೋಚಿಸುತ ॥
ಬಂಧು ಟಿಲಕರು ನಡಿಸಿಕೊಳುತಲಿ ।
ಬಂದಿಹ " ಪ್ರಜಾಪ್ರತಿನಿಧಿ ಸಭಾ " ।
ಮುಂದಿನಗ್ರೇಸರರೆನಿಸಿ ಸರ್ವಸ್ವವನು ತೊರೆದು ॥ ೫೪ ॥

ಮುಂದೆ ಗಾಂಧಿಮಹಾತ್ಮನೆನಿಸುತ ।
ವಂದೆ ಮಾತರಮೆಂಬ ಮಂತ್ರವ ।
ನೊಂದು ಬಿಡದಲೆ ಹಳ್ಳಿಹಳ್ಳಿಗೆ ಬಂದು ಬೋಧಿಸುತ ॥
ಒಂದೆಭಾರತ ಮಾತೆ ಗರ್ಭದಿ ।
ಬಂದ ಬಾಂಧವರೆನಿಸುತ ।
ಹಿಂದು ಮುಸ್ಲಿಮರೆಂಬ ಭೇದವನಂದಿಸಿದನಾಗ ॥ ೫೫ ॥

ಈತೆರದ ಕಾರ್ಯವನುನೋಡುತ- |
ಲಾತುರದಿ ಜನರೊಂದು ಕಡೆಯಲಿ |
ಕೂತು ತಮ್ಮಾಳಿಕೆಯನು ವಿರೋಧಿಸುವ ವಿಷಯದಲಿ ||
ಮಾತನಾಡದ ತೆರದಿ ವಿಧಿಸಿದ |
ನೂತನಾಜ್ಞೆಯನರಿಯದಲೆ ನಿ |
ರ್ಭೀತಿಯಿಂಜನ ಜಾಲಿಯನ್ ಬಾಗದಲಿ ನೆರೆದಿರಲು || ೫೬ ||

ಧಾವಿಸುತಲಾ ಸ್ಥಳಕೆ "ಡಾಯರ" |
ಕೋವಿ ತೋಫುಗಳನ್ನು ಹಾರಿಸಿ |
ಸಾವಿಗೀಡನು ಮಾಡಿದನನೇಕರನು ನಿರ್ದಯದಿ ||
ಭಾವಿಸಲಿಕಸದಳವು ಮನದಲಿ |
ಯಾವವಿಧದಪರಾಧಗೈಯದ |
ಭಾವಿಕರ ಕೊಲೆಗೈದ ಬ್ರಿಟಿಶರದಾಳಿಕೆಯ ಪರಿಯಾ || ೫೭ ||

ಈಸಹಿಸಲಸದಳದ ಹಿಂಸೆಗೆ |
ಹೇಸುತಲೆ ಸರಕಾರದೊಡನೆಯೆ |
ವಾಸಿಸಲು ಸಹಕರಿಸಿ ಗಾಂಧಿಗೆವಪ್ಪದೆಯೆ ಮನವು ||
ತಾಸಹಕರಿಸದಿರಲು ಜನರಿಗೆ |
ಭಾಸವಾಗುವ ತೆರದಿ ಭೋಧಿಸಿ |
ಮೀಸಲಿಟ್ಟಸುವನ್ನಸಹಕಾರವನು ಹೂಡಿದನು || ೫೮ ||

ವಿದ್ಯೆಯಿಂದಲ್ಲದಲನಾದಿಯ |
ವಿದ್ಯೆಯದು ನಾಶಿಸದದೆಂತೋ |
ಸದ್ಯದಲಿ ಹಿಂಸಾ-ನೃತಾಡಳಿತೆಯನು ನಶಿಪುದಕೇ ||
ಬೋಧ್ಯ ಸತ್ಯಾ-ಹಿಂಸೆಯಿಂದಲೆ |
ಸಾಧ್ಯವಲ್ಲದೆ ಭೇರೆ ವಿಧದಲ |
ಸಾಧ್ಯವೆಂದರಿಯುತಲಿ ಸತ್ಯಾಹಿಂಸೆ ದೀಕ್ಷೆಯನು || ೫೯ ||

ತೊಟ್ಟು ಬ್ರಿಟಿಶರು ಯುದ್ಧ ಜಯದಿಂ ।
ಕೊಟ್ಟ ಪದವಿಯು "ಕೈಸರ್ ಈ ಹಿಂದ್" ।
ಬಿಟ್ಟು ಕೊಡುತವರಿಗೆಯೆ ಹಿಂದಕೆ ಮತ್ತೆ ಪೇಳಿದರು ॥

ಬಿಟ್ಟು ಕೊಡುವುದುಚಿತವು ರಾಜ್ಯವ ।
ಬಿಟ್ಟು ಕೊಡದಿರೆ ಭಾರತೀಯರು ।
ಒಟ್ಟುಗೂಡಿಯೆ ಪಡೆಯುವೆವು ಸಾಪ್ ನಮ್ಮ ರಾಜ್ಯವನು ॥೬೦॥

ಬೇಡವೆಮಗೀ ದಾಸ್ಯ ಜೀವನ ।
ಕೇಡು ಮಾಡುವ ಶಾಲೆ ಪರರಿಗೆ ।
ಕೇಡ ಬಗೆವುದನೊರೆಯುತಿಹ ಮಹದಾಂಗ್ಲ ಶಾಲೆಗಳು ॥

ಕೂಡಿರೆಮ್ಮಯ ದೇಶಮಾತೆಯ ।
ಕಾಡುತಿರುವಾಳ್ವಿಕೆಯ ಬಿಡಿಸಲು ।
ಓಡಿ ಬನ್ನಿರಿಯೆಂದು ವಿದ್ಯಾರ್ಥಿಗಳಿಗರುಹಿದನು ॥೬೧॥

ಧನವ ಕೊಟ್ಟರೆ ನ್ಯಾಯ ಕೊಡುತಿಹ ।
ಧನಿಕರನು ನೋಡಿದರೆ ಕ್ಷಮಿಸುವ ।
ಜನಕೆ ಹಿತವಿದರಿಂದ ಸಾಧಿಪುದಿಲ್ಲವೆಂಬುದರ ॥

ಮನವರಿಕೆಯಿಲ್ಲದೆ ವಕೀಲರು ।
ಜನಿಸಿ ಕಲಹವ ತಮ್ಮ ಜೀವನ ।
ವನು ನಡೆಸಲನುಗೈವ ನ್ಯಾಯಾಲಯವು ಬೇಡೆಂದ ॥೬೨॥

ಪರರ ವಸ್ತುವ ಬಳಸಲಾರ್ಥಿಕ ।
ಕೊರತೆಯಾಗುವದಲ್ಲದಲೆ ಮಿಗೆ ।
ವರವೆನಿಪ ಜೀವನದ ಸ್ವಾತಂತ್ರ್ಯವದು ನಾಶಿಪುದ ॥

ಅರಿದು ಪರದೇಶೀಯ ವಸ್ತುವ ।
ನೆರೆ ಬಹಿಷ್ಕರಿಸುವ ವಿಚಾರವ ।
ನೊರೆದು ಜನರಿಗೆ ಸ್ವಾವಲಂಬನ ಮಾರ್ಗ ತೋರಿದನು ॥೬೩॥

ಈ ಬಹಿಷ್ಕೃತಿಯಿಂದ ತವುಗೆಯು ।
ಲಾಭವಿಲ್ಲದಲಾಗೆ ಬ್ರಿಟಿಶರು ।
ಕ್ಷೋಭೆಗೊಂಡಿವರನ್ನು ಬಂಧಿಸಿ ಕಾರಗೃಹದಲಿಡೆ ॥

ಆ ಬಗೆಯ ವ್ಯಾಧಿಯು ನಿಮಿತ್ತದಿ ।
ತಾ ಬಿಡುಗಡೆಯ ಹೊಂದಿ ದಿಲ್ಲಿಗೆ ।
ತಾ ಬರುತ ಗಲಭೆಯನು ತಣಿಸಿದನಿವನುಪೋಷ್ಯದಲಿ ॥ ೬೪ ॥

ದಾರ ತೆಗೆವುದರಿಂದ ಬಡತನ ।
ವಾರಿಪುದು ಜನರೊಳಗಿರುವ ಸೋ ।
ಮಾರಿತನ ಪೋಗುವದು ಚಿತ್ತಸ್ಥೈರ್ಯ ಸಾಧಿಪುದು ॥

ಸೂರೆಯಾಗುವ ಹಣವದುಳಿವುದು ।
ಸೇರಿಕೆಯ ಹುರಿಯಿಂದ ತಿಳಿವುದ-।
ಪಾರಶಕ್ತಿಯು ಶಕ್ತ ಸಂಘಟನೆಯೊಳಗಿಹುದೆಂದು ॥ ॥ ೬೫ ॥

ಸಾರಿ ಜನರಿಗೆ ನೂಲ್ವ ಗೃಹ ಕೈ ।
ಗಾರಿಕೆಯ ಬುದ್ಧಿಯನು ಪುಟ್ಟಿಸಿ ।
ತೋರುತಲಿ ಬಡಜನಕೆ ವಸ್ತ್ರವು ದೊರೆವ ದಾರಿಯನು ।

ಜೋರಿನಿಂ ಕೈಯಿಂದ ನೂಲ್ವ ಪ್ರ ।
ಚಾರವನು ಮಾಡುತ್ತ ರಾಷ್ಟ್ರದಿ ।
ಧೀರತನದಲಿ ಖಾದಿಯನು ಪೂರೈಸುವಿಚ್ಛೆಯಲಿ ॥ ೬೬ ॥

ಅತ್ಯಧಿಕ ಕೈನೂಲಿನರಿವೆಯ ।
ನಿತ್ಯದಲಿ ನಿರ್ಮಿಸಲು ಗಾಂಧಿಯು ।
ಪ್ರತ್ಯಹದಿಶಾ ನೂಲ್ಪದಲ್ಲದೆ ರಾಟಿ ತಿರುವುತಲಿ ॥

ಸತ್ಯವಾಗಿಯು ಜನಗಳಿಗೆ ಇದ ।
ಗತ್ಯವೆನೆ ಸ್ಥಾಪಿಸಿದರಾಗಲೆ ।
ಪ್ರತ್ಯಯದಲವ " ಅಖಿಲಭಾರತ ಚರಖಸಂಘ "ವನು ॥ ೬೭ ॥

ತನ್ನ ಜೀವನ ಚರಿತೆಯನು ತಾ ।
ನನ್ನಿಯಿಂದೆಲ್ಲವನು ವಿವರಿಸಿ ।
ಮನ್ನಿಸಿಯೆ ಜಿಜ್ಞಾಸುಗಳಪೇಕ್ಷೆಯನುಪೇಕ್ಷಿಸದೇ ॥

ಉನ್ನತಿಗೆ ನೆರವಪ್ಪ ರಾಷ್ಟ್ರದ ।
ಮನ್ನಣೆಯ ವರ "ಸತ್ಯಶೋಧನ" ।
ವನ್ನು ರಚಿಸಲುಪಕ್ರಮಿಸಿದರು ಗಾಂಧಿಯವರಾಗ ॥ ೬೮ ॥

ಮುಂದೆ ಗಾಂಧಿ ಮಹಾತ್ಮರಿಂ ಜನ ।
ಹೊಂದಿ ಜಾಗ್ರತಿಯನ್ನು ಬ್ರಿಟಿಶರು ।
ಒಂದು ವರ್ಷಾವಧಿಯೊ "ಆಧಿರಾಜ್ಯ"ವನು ನೀಡದೊಡೇ ॥

ಒಂದು ಗೂಡಿಯೆ ಶಾಂತಿಯುದ್ಧದಿ ।
ನಿಂದು ಸಂಪೂರ್ಣ ಸ್ವರಾಜ್ಯವ ।
ಹೊಂದುವಾಭಿಪ್ರಾಯ ಲಾಹೋರದಲಿ ನಿಶ್ಚಯಿಸೇ ॥ ೬೯ ॥

ಖಂಡಿಸಲಿ ಕಾಲವಣಕಾಯ್ದೆಯ ।
ಧಂಡಿಯಾತ್ರೆಯ ಮಾಡಿ ಜಲನಿಧಿ ।
ದಂಡೆಯಿಂದುಪ್ಪನ್ನು ತರುತಾ ಕಾಯ್ದೆ ಭಂಗಿಪುದಾ ॥

ಕಂಡು ಸರಕಾರವದು ಗಾಂಧಿಯ ।
ಕೊಂಡು ಪೋಗಿಡೆ ಕಾರಗೃಹದಲಿ ।
ದಂಡಿಸುತ ಕೆಲದಿನದಿ ಬಿಡುಗಡೆಗೈದರಿವರನ್ನು ॥ ೭೦ ॥

ಅಂದದಿಂ ಹೊರಬರಲು ಗಾಂಧಿಯ ।
ರೊಂದಿಗೊಪ್ಪಂದವನು "ಐರ್ವಿನ್" ।
ಕುಂದದಲೆ ಮಾಡುತ್ತಲುಪ್ಪಿನ ಕಾಯ್ದೆ ಸಡಿಲಿಸಿದ ॥

ಬಂದಿಹಾಮಂತ್ರಣವ ಮನ್ನಿಸಿ ।
ಮುಂಧೆ ಲಂಡನಕೈದಿ ಗಾಂಧಿಯು ।
ಒಂದುಗೂಡಿದ ದುಂಡುಮೇಜಿನ ಪರಿಷದದಲಾಗ ॥ ೭೧ ॥

ದುಂಡುಮೇಜಿನ ಪರಿಷದದಿಸಲಿ ।
ಮುಂಡಿಸಿರುವೆಲ್ಲಾಧಿಕಾರವ ।
ಕೊಂಡು ತೃಪ್ತಿಯ ಬಡವೆ ತೆರಳಿದನಾಗ ಭಾರತಕೆ ॥

ಖಂಡಿಸುತ ಕೊಡುಗೆಯನು ಕೆಲವು ಮು ।
ಖಂಡರಹ ನಿಃಸ್ವಾರ್ಥಿಗಳನೊಡ ।
ಗೊಂಡು ಬಂಧಿತರಾಗಿ ಕಾರಾಗೃಹದೊಳಿರುತಿರಲು ॥ ೭೨ ॥

ಹರಿಜನ ಪ್ರಶ್ನೆಯನು ಬಿಡಿಸಲು ।
ತೊರೆಯುತಾಹಾರವನು ಕಡೆಯೊಳು ।
ಭರವಸೆಯ ನೀಡಲು ಕರಾರನು ಮಾಡಿ ಪುಣೆಯೊಳಗೆ ॥

ತೊರೆಯುತುಪವಾಸವನು ದೇಶವ ।
ಚರಿಸಿ ನಿಧಿಸಂಗ್ರಹಿಸಿ ಗಾಂಧಿಯು ।
"ಹರಿಜನ"ವ ಪ್ರಕಟಿಸಲುಪಕ್ರಮಿಸಿದನು ಪತ್ರಿಕೆಯ ॥ ೭೩ ॥

ಹರಿಜನರಿಗಸ್ಪೃಶ್ಯತನದಿಂ ।
ಪರಿಪರಿಯ ಕಷ್ಟವದು ವದಗಲು ।
ಚರಿಸಿ ದೇಶವ ಬುದ್ಧಿವಾದವನೊರೆದು ಜನಗಳಿಗೆ ॥

ಸರಿಸಮಾನತೆ ಪೊಂದಿ ಜನರೊಳು ।
ಬೆರೆದು ಜೀವಿಸಲವರನೊಪ್ಪಿಸಿ ।
ಹರಿಜನೋದ್ಧಾರವನು ಮಾಡಿದನಾ ಮಹಾತ್ಮನು ॥ ೭೪ ॥

ಪರಚಿದಾತ್ಮನು ದೇಹಮನಗಳ ।
ಹೊರಗುಳಿದು ತಾ ಲಿಪ್ತನೆನಿಸದೆ ।
ಕರಣಗಳ ಚೈತನ್ಯ ಕಾರಣನೆನಿಸುವಂದದಲಿ ॥

ತೊರೆದು ಕಾರ್ಯವ ರಾಜಕೀಯದ ।
ಹೊರಗುಳಿದು ವಲ್ಲಭ ಜವಾಹಿರ ।
ರುರು ಕೃತಿಗೆ ಕಾರಣರದೆನಿಸಿದರಾಮಹಾತ್ಮರು ॥ ೭೫ ॥

ಗಿಡಗಳ ಸಮುನ್ನತಿಯೊಳೆಂತದು ।
ಅಡಕವಿರುವದೊ ತೋಟದುನ್ನತಿ ।
ಬಿಡಿಯು ಹಳ್ಳಿಗಳುನ್ನತಿಯೊಳೀ ರಾಷ್ಟ್ರದುನ್ನತಿಯು ॥

ಅಡಕವಿಹುದೆಂದರಿತು ಗಾಂಧಿಯು ।
ತೊಡಗೆ ಗ್ರಾಮೋದ್ಧಾರ ಕಾರ್ಯಕೆ ।
ವಡನೆ "ವರ್ಧಾಶ್ರಮ"ವ ತೆರೆಯುತಲಲ್ಲಿವಾಸಿಸುತಾ ॥ ೭೬ ॥

ಮಾಡಿ ಗ್ರಾಮೋದ್ಯೋಗ ಶಿಕ್ಷಣ ।
ರೂಢಿಸುತಲೂರುಗಳ ಸ್ವಚ್ಛತೆ ।
ನೀಡಿ ಸಾದಾ ಸ್ವಾವಲಂಬನ ಜೀವನದ ಸವಿಯಾ ॥

ಪಾಡಿ ನಾಮಾಮೃತವ ರಾಮನ ।
ಕೂಡಿ ಜನರಸ್ಪೃಶ್ಯಭಾವವ ।
ನೋಡಿಸುತಲವನಾಗ ಗ್ರಾಮೋದ್ಧಾರ ಮಾಡಿದನು ॥ ೭೭ ॥

ಸೆರೆಯ ಕುಡಿವುದರಿಂದ ಬಡತನ ।
ಬರುವದಲ್ಲದೆ ದೇಹದೊಳಗಿನ ।
ಕರುಳುಗಳು ಬೆಂದಾಯುರಾರೋಗ್ಯವದು ಕೆಡುತಿಹುದು ॥

ತೊರೆಸುವದು ಸತಿಸುತರ ಪ್ರೇಮವ ।
ಮರೆಸುವದು ಪರಮಾರ್ಥ ನೇಮವ ।
ಪರಿಪರಿಯ ಪಾಪವನು ಮಾಡಲಿಕೆಳೆಸುವದು ಮನವಾ ॥ ೭೮ ॥

ಹೀನನೆನಿಪನು ಜನರೊಳಗೆ ಸುರೆ ।
ಪಾನ ಮಾಳ್ಪುದರಿಂದ ಮನುಜನ- ।
ಧೀನನಪ್ಪನು ಸುರೆಯ ಮನವನು ಕೆಡಿಸಿಕೊಳ್ಳುವನು ॥

ತಾನು ಯಾರೆಂಬುವದನರಿಯದ ।
ಲೀನು ಮಾಡಲು ಮನವು ಹೇಸದೆ- ।
ಶ್ವಾನನಂದದಲೊದರುತಲಿ ತಿರುಗುವನು ಬೀದಿಯಲಿ ॥ ೭೯ ॥

ಇದುವೆ ಕಾರಣದಿಂದ ಜನಗಳೆ ।
ಮದಿರೆ ಸೇವಿಸಬೇಡಿಯೆನುತಲಿ ।
ಕುದಿವ ಮನದಲಿ ಮಾದಕನಿರೋಧ ಪ್ರಚಾರವನು ॥

ವದಗಿಸುತ ದೇಶದೊಳು ಗಾಂಧಿಯು ।
ಉದಯವಾಗುವ ಪರಿ ವಿವೇಕವು ।
ಸದಮಲಾತ್ಮನು ತಾನು ಬೋಧಿಸಿದನು ಜನರನಾಗ ॥ ೮೦ ॥

ಸಾರಿ ಯುದ್ಧವ ಜರ್ಮನರು ತಾ ।
ವೇರಿ ಬರುತಿರೆ ಮತ್ತೆ ಬ್ರಿಟಿಶರು ।
ಭಾರತೀಯರನೊಬ್ಬರನು ತಾವ್ ಕೇಳದಾಹವದಿ ॥

ಸೇರಿಸಿರೆ ಭಾರತವ ತ್ವರಿತದಿ ।
ಬೀರಿ ಯುದ್ಧನಿಷೇಧಗೈವ ಪ್ರ ।
ಚಾರ ಮಾಡಿದರಲ್ಲದಲಮಾತ್ಯಾಧಿಕಾರವನು ॥ ೮೧ ॥

ತೊರೆದು ಬರಲಿಕೆ ಮಂತ್ರಿ ಜನಗಳಿ ।
ಗೊರೆದು ಧೈರ್ಯದಲಾಂಗ್ಲ ಜನರನು ।
"ಹೊರಡಿ ಭಾರತದಿಂದ"ಲೆನುತಲಿ ಘೋಷಿಸಿದರಾಗ ॥

ಕರುಣೆಯಿಲ್ಲದೆ ಹಿಂಸೆಗೆಳಸುತ ।
ಲಿರುವ ಈ ರಾಜಕತೆಗಿಂತಲು ।
ವರವೆಮಗೆ ನಿಜ ಶಾಂತಿಮಯದ ಅರಾಜಕತೆಯೆಂದು ॥ ೮೨ ॥

ಘೋಷಣೆಯನರಿಯುತಲೆ ಬ್ರಿಟಿಶರು ।
ದ್ವೇಷ ಬಗೆವುತ ನಮ್ಮ ರಾಷ್ಟ್ರದ ।
ಶೇಷ ಪ್ರಮುಖರ ಬಂಧಿಸಿಡಲಾಕ್ಷಣದಿ ಜನರೆಲ್ಲ ॥

ತ್ವೇಷ ಸಹಿಸಲಿಕಾಗದಲೆ ಬಹು ।
ರೋಷದಿಂದಂಚೆಯ ಕಚೇರಿಯ ।
ದೋಷವೆಣಿಸದಲುಗೆಯಬಂಡಿಯ ನಶಿಸಿದರು ಸುಡುತ ॥ ೮೩ ॥

ಈ ನಡೆದನಾಹುತವನಾಗಾ ।
ಖಾನ ಹರ್ಮ್ಯದೊಳರಿತು ಗಾಂಧಿಯು ।
ತಾನು ಪ್ರಾಯಶ್ಚಿತ್ತವೆಂದುಪವಾಸ ಮಾಡಿದನು ॥

ಈ ನಡುವೆ ಬಲಭಾಗದಂತಿಹ ।
ಮಾನಧನ ಮಹಾದೇವಭಾಯಿಯು ।
ತಾನು ತೆರಳಿದನಾಗ ಸ್ವರ್ಗಕೆ ದೇಹವನು ತೊರೆದು ॥ ೭೪ ॥

ಈ ಮಹಾವೇದನೆಯ ಮಧ್ಯದೊ ।
ಳಾ ಮಹಾತ್ಮರ ಧರ್ಮ ಸತಿಯರು ।
ವಾಮತನುವೆಂದೆನಿಸಿರುವ ಕಸ್ತೂರಿಬಾಯಿಯವರು ॥

ಸೋಮಶೇಖರನಡಿಯ ಸೇರಿದ ।
ರಾಮಹಾ ಚಿಂತೆಯನು ತಳೆದಿರ ।
ಲಾಮಹಾತ್ಮರು ಬಿಡುಗಡೆಯ ಹೊಂದಿದರು ತ್ವರಿತದಲಿ ॥ ೭೫ ॥

ಮುಂದೆ " ಸಿಮ್ಲಾ ಪರಿಷದ "ಕೆ ತಾವ್ ।
ಬಂದು ಸಲಹೆಯ ನೀಡಲಿಕೆ ಮನ ।
ದಂದು ಕಾರ್ಯಾಸಕ್ತರಾದರು ರಾಜಕೀಯದಲಿ ॥

ಅಂದಿನಿಂ ಭಾರತದ " ವೈಸ್‌ರಾಯ್ " ।
ರೊಂದಿಗೆ ವಿವಾದವನು ನಡಿಸಿಯೆ ।
ತಂದರೈ ನಡುಗಾಲ ಸರಕಾರವನು ಗಾಂಧಿಯರು ॥ ॥ ೭೬ ॥

ಒಂದು ವರ್ಷಾವಧಿಯೊಳೀಯುವೆ ।
ವೆಂದು ಸಂಪೂರ್ಣ ಸ್ವರಾಜ್ಯವ ।
ನಂದು ಭರವಸೆಯಿತ್ತು ಬ್ರಿಟಿಶರು ರಾಜಕಾರ್ಯದಲಿ ॥

ಹೊಂದಿಸಿಯೆ ಸರ್ವಾಧಿಕಾರವ ।
ನೊಂದನುಳಿದಿತರಾಧಿಕಾರವ ।
ಹಿಂದಿಯರಿಗಿತ್ತಿವರಿಗಾನಂದವನು ಪಡಿಸಿದರು ॥ ೭೭ ॥

ಮುಂಡತನದಲಿ ಕೆಲವು ಯವನ ಮು ।
ಖಂಡ ಜನರೀ ಭರತಖಂಡವ ।
ಖಂಡಿಪುದನೀ “ಹಿಂದು-ಪಾಕಿಸ್ಥಾನ” ವೆಂದೆರಡಾ ॥

ಮುಂಡಿಸಿರಲಿದನುಳಿದ ರಾಷ್ಟ್ರ ಮು ।
ಖಂಡರೊಪ್ಪದಲಿರಲು ಯವನರು ।
ಬಂಡು ಹೂಡಲುಪಕ್ರಮಿಸಿದರು ವಂಗದೇಶದಲಿ ॥ ೮೮ ॥

ಸುಡುತ ಮನೆಗಳ ವಡವೆವಸ್ತುವ ।
ಕೆಡಿಸುತ ಸ್ತ್ರೀಜನರ ಮಾನವ ।
ಕಡಿಯುತಲಿ ದಾರಿಯಲಿ ತಿರುಗುವ ನಿರಪರಾಧಿಗಳಾ ॥

ಹುಡುಗರೆನ್ನದೆ ವೃದ್ಧರೆನ್ನದೆ ।
ಬಡವ ಬಲ್ಲಿದರೆನ್ನದಲೆ ಮಿಗೆ ।
ಕಡುವಿರೋಧದಿ ನಾಶಮಾಡಿದರಮಿತ ಹಿಂದುಗಳ ॥ ೮೯ ॥

ಈ ವಿಷಯ ಗಾಂಧಿಯರು ತಿಳಿಯುತ ।
ಧಾವಿಸಿಯೆ ನವಖಾಲಿಯಲ್ಲಿಗೆ ।
ತಾವು ಕಾಲ್ನಡಿಗೆಯಲಿ ಹಳ್ಳಿಗೆ ಪೋಗಿ ಜನಗಳಿಗೆ ॥

ಭಾವನೆಯ ಬಾಂಧವ್ಯಪ್ರೇಮದ ।
ಸಾವಧಾನದೊಳೊರೆದು ಬೋಧಿಸಿ ।
ಸಾವನಿಲಿಸುತ ಶಾಂತಿ ಸಾಧಿಸಿ ಮರಳುತಿರಲಾಗಿ ॥ ೯೦ ॥

ಉರುಖತಿಯೊಳೀ ಹಿಂದು ಜನರದ ।
ನೆರೆ ಸಹಿಸಲಾರದಲೆ ಯವನರ ।
ಪರಮ ಕೋಪದಿ ನಾಶಮಾಡಿದರಾ ಬಿಹಾರದಲಿ ॥

ಅರಿತಿದನು ತಾನಲ್ಲಿ ಪೋಗಿಯೆ ।
ಪರಿಪರಿಯ ಬೋಧೆಯನು ಮಾಡುತ ।
ಮರೆಸಿ ವೈರವನಾಗ ಗಾಂಧಿಯು ಶಾಂತಿ ಸಾಧಿಸಿದ ॥ ೯೧ ॥

ಅನಿತರೊಳು ಜನರೆಲ್ಲ ಹರ್ಷದಿ ।
ದಿನವ ಸಂಪೂರ್ಣ ಸ್ವರಾಜ್ಯದ ।
ಅನುನಯದಲುತ್ಸವದೊಡನೆ ಆಚರಿಸಲನುಗೈಯೆ ॥
ಮುನಿಸಿನಿಂ ಕಲಕತ್ತೆಯಲ್ಲಿಯ ।
ಜನರು ಗಲಭೆಯನೆಬ್ಬಿಸಿರಲಾ ।
ಜನಕೆ ಶಾಂತಿಯನೊರೆದನ ಪವಾಸವನು ಗೈಯುತಲಿ ॥ ೯೨ ॥

ಇಂತು ಎಲ್ಲೆಡೆಯಲ್ಲಿ ಗಲಭೆಯು ।
ನಿಂತು ಸಂತೋಷದಲಿ ದೇಶಾ ।
ದ್ಯಂತ ಸಂಭ್ರಮದೊಡನೆ ಸ್ವಾತಂತ್ರ್ಯೋತ್ಸವವು ಜರಗೇ ।
ಸಂತ ಪರಮ ವಿಭೂತಿ ಗಾಂಧಿಗ- ।
ನಂತ ಕಡೆಯಿಂ ಧನ್ಯವಾದವು ।
ತಂತಿಮೂಲಕ ಪತ್ರಮೂಲಕವಾಗಿ ಸುರುವಿದವು ॥ ೯೩ ॥

ಜಯಜಯವು ಗಾಂಧೀ ಮಹಾತ್ಮಗೆ ।
ಜಯವು ಸ್ವಾತಂತ್ರ್ಯಪ್ರದಾತಗೆ ।
ಜಯವು ರಾಷ್ಟ್ರದ ಪಿತಗೆ ಜಯವೈ ಶಾಂತಿದೂತನಿಗೇ ॥
ಜಯವು ಸತ್ಯಾಹಿಂಸೆ ವ್ರತನಿಗೆ ।
ಜಯವು ನಿತ್ಯಾನಂದ ಮೂರ್ತಿಗೆ ।
ಜಯವೆನುತ ಘೋಷಿಸುತಲೆಲ್ಲಾ ಜನರು ಹರುಷದಲಿ ॥ ೯೪ ॥

ಹಾರಿಸಿದರಾ ಜಯಪತಾಕೆಯ ।
ನೇರಿಸುತಲಾ ಧ್ವಜಕೆ ವೇಗದಿ ।
ಮೂರು ಬಣ್ಣಗಳಿಂದ ಶೋಭಿಸುತಿರುವ ಮಧ್ಯದಲಿ ॥
ಚಾರು ಚಕ್ರಾಂಕಿತದಿ ಮೆರೆಯುವ ।
ಭೂರಿ ವೈಭವ ಶಾಲಿಯಾಗಿಹ ।
ಸಾರಿ ಶಾಂತಿಯ ಜನಕೆ ಸ್ವಾತಂತ್ರ್ಯವನು ಕೊಡಿಸಿರುವ ॥ ೯೫ ॥

ಈ ಮಹೋತ್ಸವದಿಂದ ಗಾಂಧಿಯು ।
ತಾಮನದಲುಬ್ಬದಲೆ ಜನರಿಗೆ ।
ರಾಮರಾಜ್ಯವ ಗೈವ ಪರಿಯನು ಬೋಧಿಸಲಿಕಾಗ ॥

ನೇಮದಿಂ ಬೆಳಗಿನಲಿ ಸಂಜೆಲಿ ।
ರಾಮನಾಮವ ಭಜಿಸಿ ಕಡೆಯಲಿ ।
ಪ್ರೇಮದಿಂ ಭಾಷಣದಿ ಸತ್ಯಾಹಿಂಸೆ ಧರ್ಮಗಳಾ- ॥ ೯೬ ॥

ಲಾಭವನು ತಿಳಿಸುತಲಿ ತಾ ಬಿ- ।
ಲಾರ್ಭವನದೊಳಗಿದ್ದು ಶಾಂತಿಯ ।
ಲಾ ಭರವಸೆಯನೀಡುತೆಲ್ಲರ ಜೀವರಕ್ಷಣೆಯ ॥

ಲಾಭವಿಚ್ಛಿಪ ವಣಿಜಜನಕತಿ ।
ಲಾಭದಿಚ್ಛೆಯ ಬಿಡಲು ತಿಳಿಸುತ ।
ಲಾಭಯುವ ಪರಿಹರಿಸಿದರು ಹಠದಿಂ ನಿಯಂತ್ರಣದ । ॥ ೯೭ ॥

ಈಶನೊಳು ತುಂಬಿಹುದು ಜಗವಿದು ।
ಈಶನಾವಾಸವಿದು ಪೂರ್ಣನ ।
ಈಶದತ್ತವನುಣುವದಲ್ಲದೆ ಪರರ ಧನಕಾಗಿ ॥

ಆಶೆ ಮಾಡಲು ಬೇಡವೆಂಬುವ ।
"ಈಶವಾಸ್ಯ"ವನೊರೆಯುತಲಿ ಮಧು ।
ರೇಶ ಪೇಳಿದ "ಗೀತೆ"ಯನು ಬೋಧಿಸುತ ಕಡೆಯೊಳಗೇ ॥ ೯೮ ॥

ಹೆರರ ಮನವನು ನೋಯಿಸದಲಿಹ ।
ಪರದಿ ಸುಖ ನೀಡುವ "ದಹಿಂಸೆ"ಯು ।
ನಿರುಪಮ ಬ್ರಹ್ಮಸ್ವರೂಪವು ಧೈರ್ಯ ಸಾಧಕವು ॥

ಪರವೆನಿಪ "ಸತ್ಯ"ವದು ಧರ್ಮದೊ- ।
ಳುರುನಿಜಶ್ರಮ ಫಲವನುಣ್ಣುತ ।
ಪರಧನಕೆ ಮನವೆಳಸದಿಹು "ದಸ್ತೇಯ"ವೆನಿಸುವದು ॥ ೯೯ ॥

ಪರಸತಿಯರೆಲ್ಲರನು ಮಾತೆಯು ।
ತೆರದಿ ತಿಳಿವುದೆ "ಬ್ರಹ್ಮಚರ್ಯ"ವು ।
ಜರಿದೆ ಘುಳಿಸದೆ ತಾನು ಜೀವಿಸುತಿಹ "ದಸಂಗ್ರಹ"ವು ॥

ನಿರುತದಲಿ ಸೋಮಾರಿತನವನು ।
ತೊರೆದು ದುಡಿಯುವವದು "ಶರೀರಶ್ರಮು" ।
ಪರಿಪರಿಯ ರುಚಿಗೆಳಸದಿಹು "ದಸ್ವಾದ"ವೆನಿಸುವದು ॥ ೧೦೦ ॥

ಎಲ್ಲ ಧರ್ಮಗಳಲ್ಲಿ ಪೇಳುವ ।
ಸೊಲ್ಲ ತಿಳಿವುತಲಾತ್ಮನರಿವಿಗೆ ।
ಸಲ್ಲುತಿರುವಾ ಚಿತ್ತಶುದ್ಧಿಯ ಗೈವವೆಂದೆನುತ ॥

ಬಲ್ಲ ಮುನಿಗಳು ಬೋಧಿಸಿರುತಿಹ ।
ಪಲ್ಲವಿತತರು ಶಾಖೆಯೆನುತಲಿ ।
ಬಲ್ಲತನವೇ "ಸರ್ವಧರ್ಮ ಸಮಾನತೆ"ಯದೆಂದು ॥ ೧೦೧ ॥

ದೇವರೊಂದುಳಿದಿತರರಿಂದಲ ।
ದಾವ ಭಯಪೊಂದದಲೆ ಇರುತಿಹ ।
ಭಾವನೆಯೆ "ಸರ್ವತ್ರ ಭಯವರ್ಜನ"ವದೆಂದೆನುತ ॥

ಸಾವಿಗಂಜದೆ ದೇಶಸೇವಿಪ ।
ಭಾವವದುವೆ "ಸ್ವದೇಶಿ ಭಾವನೆ" ।
ಭಾವಿಸದಲಸ್ಪೃಶ್ಯತನವದೆ "ಸ್ಪರ್ಶಭಾವನೆ"ಯು ॥ ೧೦೨ ॥

ಈ ಪರಿಯ ಹನ್ನೊಂದು ವ್ರತಗಳ ।
ತಾ ಪರಿಗ್ರಹಿಸುತಲಿ ಮನದಲಿ ।
ಲೇಪವಾಗುವ ತೆರದಿ ಜನರಿಗೆ ಬೋಧಿಸುತಲಾಗ ॥

ತಾ ಪರಮಾತ್ಮ ಧ್ಯಾನದಿಂದನು- ।
ತಾಪ ಶಾಂತಿಯ ಪೊಂದುತಲಿ ಸೀ- ।
ತಾಪತಿಯ ಭಜನೆಯನು ಮಾಡುತಲಿದ್ದನೈ ಗಾಂಧೀ ॥ ೧೦೩ ॥

ಹೀಗಿರಲು ದಿಲ್ಲಿಯಲಿ ಸೇಡಿನ ।
ಲಾಗಿ ಜಾತಿದ್ವೇಷ ಕಿಚ್ಚಿನ ।
ಬೇಗೆಯೇಳಲು ಮತ್ತೆ ಗಾಂಧಿಯು ತಣಿಸಲದನಾಗ ॥

ಕೂಗಿ ಹೇಳುತಲೈಕ್ಯಬೋಧೆಯು ।
ಲಾಗದಿರಲೈಕ್ಯತೆಯು ಪ್ರಾಣವ ।
ನೀಗುವದ ನಿಶ್ಚಯಿಸುತುಪವಾಸವನು ಕೈಕೊಂಡ ॥ ೧೦೪ ॥

ಕಂಡಿದನು ಜನರೆಲ್ಲ ತಾವ್ ಭಯ ।
ಗೊಂಡಿರಲು ಭಾರತದ ಜಾತಿ ಮು ।
ಖಂಡರೆಲ್ಲರು ಸೇರುತಲಿ ಗಾಂಧಿಯನು ಸಂತೈಸೇ ॥

ಮುಂಡತನವನು ತೊರೆದು ಜನರೊಡ ।
ಗೊಂಡು ಏಳ್ಕರತುಗಳಿಗೊಪ್ಪಲು ।
ಕೊಂಡು ಹಣ್ಣಿನರಸವನುಪವಾಸವನು ಮುಗಿಸಿದನು ॥ ೧೦೫ ॥

ಒಂದುದಿನ ಸಂಜೆಯಲಿ ಪ್ರಾರ್ಥನೆ ।
ಗೆಂದು ಗಾಂಧಿಯರುಭಯ-ಪೌತ್ರಿಗ ।
ಳೊಂದಿಗೆಯೆ ನಡೆಯುತಲಿ ಬಿರ್ಲಾಭವನದೆಡೆಗಿರುವ ॥

ಅಂದವಾದಂಗಣಕೆ ತಾವ್ ಜನ ।
ಸಂದಣಿಯ ಮಧ್ಯದಲಿ ಬರುತಿರ ।
ಲೊಂದು ಘಟನೆಯು ಘಟಿಸಿತದನಾನೇತು ವಿವರಿಸಲಿ ॥ ೧೦೬ ॥

ಆ ಮಹಾತ್ಮರ ಮುಂದೆ ನಾಥೂ ।
ರಾಮನೆಂಬವನೋರ್ವ ಬಂದು ಪ್ರ ।
ಣಾಮ ಮಾಡುವ ತೆರದಿ ನಟಿಸುತಲೊಗೆಯೆ ಗುಂಡುಗಳ ॥

ಆ ಮಹಾಧ್ವನಿ ಕೇಳಿ ಗಾಂಧಿಯು ।
ರಾಮನಾದೇಶೆಂದರಿತು " ಹೇ ।
ರಾಮ್ "ನುತ ದೇಹವನು ತೊರೆದಾಥಾಮುಕೈದಿದನು ॥ ೧೦೭ ॥

ಮಂಗಲವು ಗಾಂಧೀ ಮಹಾತ್ಮಗೆ ।
ಮಂಗಲವು ಶಾಂತಿ ಪ್ರಕಾಶಗೆ ।
ಮಂಗಲವು ಸ್ವಾತಂತ್ರ್ಯಗಂಗೆಯ ನೆರೆದ ಭಗಿರಥಗೇ ॥

ಮಂಗಲವು ಕಲಿಕರ್ಮ ಯೋಗಿಗೆ ।
ಮಂಗಲವು ಸತ್ಯವ್ರತಕೆ ಶುಭ ।
ಮಂಗಲವು ಜಾತ್ಯೈಕ್ಯ ಸಾಧಕ ಲೋಕನಾಯಕಗೆ ॥ ೧೦೮ ॥

**ಇಂತು ನೂರಾಎಂಟು ಪದ್ಯಗಳಿಗೆ**

**ಮಹಾತ್ಮಾ**

**ಗಾಂಧೀ ಚರಿತ್ರೆಯು ಮುಗಿಯಿತು.**

---

## ಲೇಖಕನ ಪರಿಚಯ

ಘಟ್ಟತಲದಿಹ ನವಿಲಗೋಣದ ।
ಕಟ್ಟೆಗಣಪತಿ ಭಜಕವಂಶದಿ ।
ಪುಟ್ಟಿ ಸಿದ್ದಾಪುರದಲಿಹ ಶ್ರೀ ರುಕ್ಮಿಣೀಸಹಿತ ॥

ವಿಠ್ಠಲಾರ್ಚಕ ರಾಮನಾಮಕ ।
ಭಟ್ಟನಿದರಚಿಸಿಯೆ ಯಥಾಮತಿ ।
ಇಟ್ಟಿಹೆ ಶ್ರೀ ಭಾರತಾಂಬೆಯ ಚರಣಕಮಲದಲಿ ॥

---

# ಶ್ರದ್ಧಾಂಜಲಿಃ

ರಾಜ್ಯಂ ಚಾಣಬಲೈರ್ನತು ಪ್ರವಚನೈರ್ಲಭ್ಯಂ ಜನಾಮೇನಿರೇ ।
ಯೇಗೀರ್ಭಿಸ್ತ್ವನಘಂ ಸ್ವಕಂ ಪರಗತಂ ರಾಜ್ಯಂ ಪುನರ್ಲೇಭಿರೇ ।
ಗೀರ್ವಾಣತ್ವಪದಂ ಪ್ರಸಿದ್ಧ್ಯತಿ ತತಸ್ತೇಷಾಂ ಯಥಾರ್ಥಂ ತಥಾ ।
ತೇಷಾಂ ನಾಯಕಭಾವತ ಸ್ತವತು ಗಾಂಧೇ ಐಂದ್ರಮಾಮನ್ಯತೇ ॥೧॥

[ ರಾಜ್ಯವು ಯುದ್ಧದಿಂದಲೇ ಹೊರತು ಪ್ರವಚನಾದಿಗಳಿಂದ ಸಿಗತಕ್ಕದ್ದಲ್ಲವೆಂದು ಜನರು ತಿಳಿದರು. ಆದ್ದರಿಂದ ಯಾರು ಪರಗತವಾದ ತಮ್ಮ ರಾಜ್ಯವನ್ನು ಪುನಃ ಪಾಪರಹಿತವಾಗಿ ಮಾತುಗಳಿಂದಲೇ (ಚರ್ಚೆಗಳಿಂದ) ಪಡೆದರೋ, ಅವರಿಗೆ ಗೀರ್ವಾಣ, ಶಬ್ದವು ಒಪ್ಪುತ್ತದೆ. ಹಾಗೆಯೇ ಅವರಿಗೆ ನಾಯಕನಾಗಿರುವದರಿಂದ ಹೇ ಗಾಂಧಿಯೇ, ನಿನಗೆ ಇಂದ್ರನ ಪದವಿಯು ಒಪ್ಪುತ್ತದೆ. ]

ತ್ವನ್ನಾಮ ಮೋಹನ ಇತಿ ಪ್ರಥಿತಂ ಹಿ ಕಿಂತು
ತ್ವಂ ಸ್ವಾರ್ಥಮುಗ್ಧ ಜನ ಜಾಗೃತಿಕಾರಣೋಸಿ ।
ದಾಸೇತಿ ವಂಶಗತಯಾऽಭಿಹಿತೋಸಿ ಕಿಂತು
ದಾಸತ್ವ ಬಂಧನ ವಿಭೇದನ ಮೂಲಶಕ್ತಿಃ ॥ ೨ ॥
ಗಾಂಧೀತ್ಯುಪಾಹ್ವಯತಿ ಕಿಂತು ನ ಗರ್ವಲೇಶಃ
ಸಂಕೇತನಾಮ ಖಲು ಮೋಹನದಾಸಗಾಂಧೇ ।
ನೋಪೇಕ್ಷ್ಯತಾಂ ಭಜತಿ ಶಿಷ್ಟಗುಣಃ ಸ್ವನಾಮ್ನಾ
ತ್ಯಾಜ್ಯೋಪಿ ಬಾಹ್ಯಕಠಿಣೋ ನಹಿ ನಾರಿಕೇಲಃ ॥ ೩ ॥

[ಗಾಂಧಿಯೇ ನಿನ್ನಹೆಸರು ಮೋಹನನೆಂದು ಪ್ರಸಿದ್ಧವಾಗಿದೆ. ಆದರೆ ನೀನು ಸ್ವಾರ್ಥದಿಂದ ಕರ್ತವ್ಯ ಮೂಢರಾದ ಜನರ ಎಚ್ಚರಕ್ಕೆ ಕಾರಣನಾಗಿದ್ದೀಯೆ. 'ದಾಸ' ಎಂದು ವಂಶಾನುಗುಣವಾಗಿ ಕರಿಸಿಕೊಳ್ಳುತ್ತಿ; ಆದರೆ ದಾಸತ್ವ ಬಂಧನವನ್ನು ಕತ್ತರಿಸಿ ಡವರಲ್ಲಿ ಮೊದಲನೇಯವನಿರುತ್ತೀ. ಗಾಂಧಿಯೆಂದು ಅಡ್ಡಹೆಸರಿನಿಂದ ಜನರು ಕರೆಯುತ್ತಾರೆ ಆದರೆ ನೀನು ನಿಗರ್ವಿಯಿರುತ್ತೀ. ಆದ್ದರಿಂದ ಮೋಹನದಾಸ ಗಾಂಧಿ ಎನ್ನುವದು ಸಂಕೇತ ನಾಮವಿರುತ್ತದೆ. ಗುಣಾಢ್ಯನು ಹೆಸರುಮಾತ್ರದಿಂದ ಉಪೇಕ್ಷೆಯನ್ನು ಹೊಂದುವದಿಲ್ಲ. ಕತ್ತಗರಟೆಗಳೇ ಮುಂತಾದ ಕಠಿಣವಸ್ತುಗಳಿಂದ ಕೂಡಿದ್ದರೂ ತೆಂಗಿನ ಕಾಯಿಯು ತ್ಯಾಜ್ಯವಲ್ಲ. ]

ದ್ವಾರಸ್ಥೈರಪರೀಕ್ಷಿತೇಽಮಿತಜನೇ ಯಃ ಪ್ರಾರ್ಥನಾಯಾಂಗಣಂ ।
ಜಾರಶ್ಯಾದುಪವಾಸತಶ್ಚ ಕೃಶಿತಂ ಪೌತ್ರೀಸಹಾಯಾಗತಂ ।
ಗಾಂಧಿಂ ನಮ್ರತಯಾ ವ್ಯವಂಚಯದಹೋ ಕಿನ್ನಾಮ ತತ್ಪೌರುಷಂ ।
ಜಾನೇ ನಾಸ್ಯಕೃತೇ ದಿವಂ ರಚಯಿತುಂ ಜಾಯೇತ ಕಃ ಕೌಶಿಕಃ ॥೪॥

[ಬಾಗಿಲುಕಾಯುವವರು ಸೋಯಿಸದೇ ಬಿಟ್ಟಾಗ, ಬಹಳಜನರ ಗಲಾಟೆಯಲ್ಲಿ ಪ್ರಾರ್ಥನಾಂಗಣಕ್ಕೆ ಪೌತ್ರಿಗಳೊಂದಿಗೆ ಬರುತ್ತಿರುವ, ಉಪವಾಸದಿಂದಲೂ ಮುಪ್ಪಿನಿಂದಲೂ ಕೃಶರಾದಂಥ, ಗಾಂಧಿಯವರನ್ನು ನಮ್ರತ್ವವನ್ನು ನಟಿಸಿ ಯಾವನು ಮೋಸಗೊಳಿಸಿದನೋ ಅವನ ಪೌರುಷವನ್ನು ಏನು ಹೇಳಬೇಕು? ಅವನಿಗಾಗಿ ಸ್ವರ್ಗ ನಿರ್ಮಾಣಕ್ಕೆ ಯಾವ ವಿಶ್ವಾಮಿತ್ರನು ಹುಟ್ಟುವನೋ ನಾನರಿಯೆ.]

ಯಃ ಸತ್ಯಾಗ್ರಹಸಮಯೇ ಗ್ರಾಸತ್ಯಾಗಂ ಚಕಾರ ಪೂರ್ಣಾಶಂ ।
ತಸ್ಯ ತ್ಯಾಗ ಹಸಮಯೇ ಗ್ರಸ್ತಾಶೋ ವಂಚಕೋ ವಪುರ್ನಾಶಂ ॥ ೫ ॥

[ಯಾವನು ಸತ್ಯಾಗ್ರಹ ಕಾಲದಲ್ಲಿ ಇಷ್ಟಸಿದ್ಧಿಯ ಪರ್ಯಂತ ಅನ್ನತ್ಯಾಗವನ್ನು ಮಾಡಿದ್ದನೋ ಅದರ ತ್ಯಾಗದಿಂದ ಸಂತೋಷಮಯವಾದ ಕಾಲದಲ್ಲಿ ಅವರ ದೇಹನಾಶವನ್ನು ಯಾವನೋ ವಂಚಕನು ಮಾಡಿದನು.]

ಯಾವತ್ತವ ಮರಣೇಚ್ಛಾ ನೋಭೂತ್ಸ್ವಾತಂತ್ರ್ಯಪ್ರಾಪಣಪರಸ್ಯ ।
ತಾವತ್ಕಿಮಪಿ ನಕರ್ತುಂ ಶಕ್ತಾನರ್ಥಾಽಸುರೀ ಶಕ್ತಿಃ ॥ ೬ ॥

[ಎಲ್ಲಿಯತನಕ ಸ್ವಾತಂತ್ರ್ಯ ಪ್ರಾಪ್ತಿಗಾಗಿ ತತ್ಪರನಾದ ನಿನಗೆ ಮರಣೇಚ್ಛೆ ಇದ್ದಿಲ್ಲವೋ ಅಲ್ಲಿಯವರೆಗೆ ನಿನ್ನನ್ನು ಯಾವ ಆಸುರೀಶಕ್ತಿಯೂ ಏನನ್ನೂ ಮಾಡಲಾರದಾಯಿತು. ]

ನನು ಗಲಿತವಪುಷ್ಟ್ವಾತ್ಪತ್ತನೈಕಸ್ಥವಾಸಾ- ।
ಧ್ಭುವನ ಜನಿತ ವರ್ಣದ್ವೇಷನಾಶೇಽಸಮರ್ಥಂ ॥
ಸ್ವಮಿತಿ ಸಪದಿ ಮತ್ವಾ ತ್ಯಕ್ತವಾನ್ ಪಣ್ಯದೇಹೌ ।
ಸಕಲ ಜನ ಹೃದಿಸ್ಥಃ ಸೈಕಮತ್ಯಂ ಚಿಕೀರ್ಷುಃ ॥ ೭ ॥

[ದೇಹವು ಜೀರ್ಣವಾದದ್ದರಿಂದಲೂ ಪಟ್ಟಣದಲ್ಲೇ ವಾಸಿಸಿರುವದರಿಂದಲೂ ದೇಶದಲ್ಲಿ ಜನಿಸಿದ ವರ್ಣ ದ್ವೇಷಾದಿಗಳನ್ನು ನಾಶಮಾಡುವದರಲ್ಲಿ ತಾನು ಅಸಮರ್ಥನಾದೆನೆಂದು ತಿಳಿದು ಸಕಲ ಜನರ ಹೃದಯದಲ್ಲಿ ಇದ್ದು ಐಕಮತ್ಯವನ್ನುಂಟು ಮಾಡುವ ಇಚ್ಛೆಯಿಂದ ದೇಹವನ್ನೂ ಪಟ್ಟಣವನ್ನೂ ಬಿಟ್ಟನೋ ಏನೋ. ]

ಪ್ಲಾವನಗಾಂಧೀಕೃತೇ ದೇಶೇ ಗಾಂಧಿಂ ಸ್ವಾತಂತ್ರ್ಯದರ್ಶಕಂ
ಜಾನಂತು ರಾಮಂ ಮನುಜಾ ನಾತುರಾಮವಿವಂಚಿತಂ ॥ ೮ ॥

[ ಪರದೇಶೀಯರಿಂದ ಮುಸುಕಲ್ಪಟ್ಟಾಗ ಸ್ವಾತಂತ್ರ್ಯವನ್ನು ತೋರಿಸಿದಂಥಾ ಮತ್ತು ನಾಥುರಾಮನಿಂದ ವಂಚಿತನಾದಂಥಾ ಗಾಂಧಿಯನ್ನು, ಕಪಿಸಮೂಹಕ್ಕೆ ಸ್ವಾತಂತ್ರ್ಯ ಕೊಡಿಸಿದಂಥಾ ಶ್ರೀರಾಮನೆಂದು ಜನರು ತಿಳಿಯಲಿ (ಧ್ವನಿ). ]

ವಿನಾಯಕೋಽಭವದ್ದೇಶೋ ಮೋಹನಾಹ್ವಯ ಗಾಂಧಿನಾ ।
ವಿನಾಯಕಃ ಕೃತಃ ಸೋದ್ಯ ನಾತುರಾಮಾಹ್ವ ಗೋಡಸಾ ॥ ೯ ॥

[ಮೋಹನನೆಂಬ ಗಾಂಧಿಯಿಂದ ಈ ರಾಷ್ಟ್ರವು ವಿಶಿಷ್ಟನಾಯಕನುಳ್ಳದ್ದೆನಿಸಿತ್ತು ನಾತುರಾಮ ಗೋಡಸೆಯಿಂದ ನಾಯಕನನ್ನು ಕಳಕೊಂಡ ರಾಷ್ಟ್ರವಾಯಿತು.]

ಸತ್ಯಕ್ಷಮಾದಯಾಶಾಂತಿ ರಾಷ್ಟ್ರಪ್ರೇಮಾದಿನಾಂತಥಾ ।
ಅಹಿಂಸಾಸಮಬುದ್ಧೀನಾಂ ಮೂರ್ತಿರ್ವೈ ಗಾಂಧಿರೀರಿತಃ ॥ ೧೦ ॥
ನಷ್ಟೇ ದೇಹೇ ಸ್ಥಿತಾಸ್ತೇಷಾಂ ಯೇಷಾಂ ಹೃದಿಗುಣಾಇಮೇ ।
ಘಟೇ ನಷ್ಟೇ ತದಾಕಾಶೋ ಮಹಾಕಾಶೇ ವಿಲೀಯತೇ ॥೧೧॥

[ ಸತ್ಯ-ಕ್ಷಮಾ-ದಯಾ ಶಾಂತಿ ರಾಷ್ಟ್ರಪ್ರೇಮ ಅಹಿಂಸೆ ಸಮಬುದ್ಧಿ ಇವುಗಳ ಮೂರ್ತಿಯೇ ಗಾಂಧಿಯೆಂದು ಹೇಳಲ್ಪಟ್ಟಿದ್ದು, ಆ ದೇಹವು ನಷ್ಟವಾದ ಮೇಲೆ ಆಗುಣಗಳು ಯಾರ ಹೃದಯದಲ್ಲಿ ಇರುವವೋ ಅಲ್ಲಲ್ಲಿ ಆ ಗುಣಗಳು ಸೇರಿವವು. ಘಟವು ಒಡೆದ ಮೇಲೆ ಆ ಆಕಾಶವು ಮಹಾಕಾಶದಲ್ಲಿ ಸೇರುವುದು. ( ಅಮರತ್ವಸಿದ್ಧಿ ) ].

ನಚೋತ್ಥಾನೈರ್ಮೌನಾನಶನ ಪರಿದೇವಾಶ್ರುವಹನೈ- ।
ರ್ನಚಸ್ತುತ್ಯಾ ಮೂರ್ತ್ಯಾಲಯ ಜಯಶಿಲಾಸ್ಥಾಪನ ವಿಧೈಃ ।
ನತುಷ್ಟಃ ಸ್ಯಾದ್ಗಾಂಧಿಃ ಪ್ರತಿಭಟದಶಾಂತ್ಯಾಹೃತತನುಃ ।
ಸುಶಾಂತ್ಯಾತುಷ್ಟಃ ಸ್ಯಾತ್ಸಕಲ ಜನಸೌಹೃಜ್ಜನಿತಯಾ ॥ ೧೨ ॥

[ ಪ್ರತಿಭಟಿಸಿದ ಅಶಾಂತಿಯಿಂದ ಆಹರಿಸಲ್ಪಟ್ಟ ದೇಹವುಳ್ಳ ಗಾಂಧಿಯು ಎದ್ದುನಿಲ್ಲುವದು, ಮೌನ, ಉಪವಾಸ, ಅಳುವದು, ಕಣ್ಣೀರಿಡುವದು, ಸ್ತುತಿ, ಮೂರ್ತಿ, ಆಲಯ, ಜಯಶಿಲಾ, ಮುಂತಾದವುಗಳ ಸ್ಥಾಪನೆ, ಇವುಗಳಿಂದ ತುಷ್ಟನಾಗಲಾರನು ಸಕಲ: ಜನರ ಪರಸ್ಪರ ಪ್ರೇಮದಿಂದುಂಟಾದ ಶಾಂತಿಯಿಂದ ಮಾತ್ರ ತುಷ್ಟನಾದಾನು. ]

ಸಾಯುಜ್ಯಂ ಮಹದೇವ ಕಸ್ತುರಿ ಮುಖಾಸ್ತ್ಯಕ್ತಾಸವಃ ಸಂಗರೇ ।
ಸಾರೂಪ್ಯಂತ್ವಿಹವಲ್ಲಭಾರ್ಯ ನೆಹರೂಮುಖ್ಯಾಅವಾಪುಃ ಪದಂ ।
ಸಾಮೀಪ್ಯಂ ಭವದಾಶ್ರಮಸ್ಥಿತಜನಾಃ ಶುಶ್ರೂಷಮಾಣಾಸ್ತವ ।
ಸಾಲೋಕ್ಯಂತ್ವಿಹಭಾರತಾತ್ಮಜನಿತಾಃ ಸರ್ವೇಜನಾ ನೇತರೇ ॥

[ಸ್ವಾತಂತ್ರ್ಯಸಂಗ್ರಾಮದಲ್ಲಿ ಪ್ರಾಣಬಿಟ್ಟ ಮಹದೇವಭಾಯಿ ಮೊದಲಾದವರು ನಿನ್ನ ಸಾಯುಜ್ಯವನ್ನು ಹೊಂದಿದರು. ವಲ್ಲಭಭಾಯಿ ರಾಜಗೋಪಾಲಾಚಾರ್ಯ ಮೊದಲಾದ ನಿನ್ನ ಸಮಾನರು ಸಾರೂಪ್ಯವನ್ನು ಹೊಂದಿದರು. ಆಶ್ರಮದಲ್ಲಿ ನಿನ್ನ ಸೇವೆ ಮಾಡಿದವರು ಸಾಮೀಪ್ಯವನ್ನು ಹೊಂದಿದರು. ಭರತಖಂಡದಲ್ಲಿ ಹುಟ್ಟಿದ ಎಲ್ಲರೂ ಸಾಲೋಕ್ಯವನ್ನು ಹೊಂದಿದರು. ಇತರರಿಗೆ ಇಲ್ಲ.]

ಯದಿ ಶ್ರದ್ಧಾವಂತೋ ವಚಸಿ ಭವದೀಯೇಽಮೃತಸಮೇ ।
ತ್ಯಜಂತೋ ವರ್ಣೇರ್ಷ್ಯಾಂ ತದನುಯಯುರನ್ಯೋನ್ಯ ಸುಹೃದಃ ।
ವಿಭೇದೋರಾಷ್ಟ್ರಸ್ಯ ಪ್ರಭವತಿ ಹಿ ನಾಮ್ನೈವ ವಿಹಿತಃ ।
ಸ ಏವಾದ್ಯ ಪ್ರಾಪ್ತಃ ಪ್ರಲಯಕರಕಾಲಾಗ್ನಿಸಮತಾಂ ।

[ ಹೇಗಾಂಧಿಯೇ ಜನರು ನಿನ್ನ ಅಮೃತಸಮವಾದ ಮಾತಿನಲ್ಲಿ ವಿಶ್ವಾಸವಿಟ್ಟು ಅದನ್ನನುಸರಿಸಿ ವರ್ಣದ್ವೇಷವನ್ನು ಬಿಟ್ಟು ಪರಸ್ಪರ ಪ್ರೇಮದಿಂದ ಇದ್ದರೆ ರಾಷ್ಟ್ರಭೇದವು ಹೆಸರಿಗೆ ಮಾತ್ರವಾಗುತ್ತದೆ. ಅದೇ ಈಗ। ಪ್ರಳಯಕಾಲದ ಅಗ್ನಿಗೆ ಸಮಾನವಾಗಿದೆ.]

ಶ್ರೀಮತ್ಕೈಲಾಸವಾಸಿನಃ ಕಲಿಯುಗಕರ್ಮಯೋಗೀಶ್ವರಸ್ಯ
ಸತ್ಯಕ್ಷಮಾದಯಾಮೂರ್ತೇರನನ್ಯಸಾಧ್ಯ
ಸ್ವಾತಂತ್ರ್ಯ ಗಂಗಾವತರಣ ಭಗಿರಥಸ್ಯ
ಹುತಾತ್ಮನೋ ಮಹಾತ್ಮಾ ಗಾಂಧೇಃ
ಚರಣಾರವಿಂದಯುಗಳೇ
ಸಮರ್ಪಿತೋಽಯಂ
ಶ್ರದ್ಧಾಂಜಲಿಃ

---

ಪುಸ್ತಕಗಳು ದೊರೆಯುವ ಸ್ಥಳ:

ರಾಮಭಟ್ಟ ವಿಠ್ಠಲ ಮಂದಿರ
ಸಿದ್ದಾಪುರ
ಜಿಲ್ಲಾ : ಉತ್ತರ ಕಾನಡಾ

ಇದೇ ಗ್ರಂಥಕರ್ತರಿಂದ ರಚಿತವಾಗಿ ಮುಂದೆ
ಪ್ರಕಟವಾಗಲಿಕ್ಕುವ ಪುಸ್ತಕಗಳು

೧) ಆತ್ಮಬೋಧ (ಶಂಕರಾಚಾರ್ಯ ಕೃತ ಆತ್ಮಬೋಧದ ಕನ್ನಡ ಪದ್ಯಾನುವಾದ)

೨) ಶನೈಶ್ಚರ ವ್ರತ ಕಥಾ (ಸಂಸ್ಕೃತ)

ಪುಸ್ತಕ ವ್ಯಾಪಾರಿಗಳಿಗೆ ಯೋಗ್ಯ ಕಮೀಶನ್ ಕೊಡಲಾಗುವದು.

---

Special Paper Quota Sanctioned
as per No. 65 / 25000 / III dated 19-8-1949
of Civil Supplies Department, Bombay